


ತಿರುಮಲೆ ತಿರುಪತಿ ದೇವಸ್ಥಾನಗಳು

# ಶ್ರೀವಾರಿ ಸೇವೆ

## ಭಕ್ತರಿಗೆ ಸ್ವಚ್ಛಂದ ಸೇವಾವಕಾಶ



ಶ್ರೀ ವೆಂಕಟೇಶ್ವರ ಸ್ವಾಮಿಯು ನೆಲೆಸಿರುವ ಪವಿತ್ರವಾದ ತಿರುಮಲೆಗೆ ವರ್ಷಂಪ್ರತಿ ಲಕ್ಷಾಂತರ ಮಂದಿ ಭಕ್ತರು ಬಂದು ಹೋಗುತ್ತಾರೆ. ದೇಶದ ನಾನಾ ಭಾಗಗಳಿಂದ ಬರುವ ಈ ಯಾತ್ರಿಕರ ಸೇವೆಯಲ್ಲಿ ಮತ್ತೂ ಹೆಚ್ಚಿನ ಅನುಕೂಲಗಳನ್ನುಂಟುಮಾಡಲೆಂದು ತಿರುಮಲ ತಿರುಪತಿ ದೇವಸ್ಥಾನಗಳು "ಶ್ರೀವಾರಿ ಸೇವೆ"ಯನ್ನು ಆರಂಭಿಸಿದೆ.

ಸೇವಾ ಮನೋಭಾವವನ್ನು ಹೆಚ್ಚಿಸಿ, ಸೌಹಾರ್ದತೆಯನ್ನು ಬೆಳೆಸಿ ಭಕ್ತಿಭಾವವನ್ನು ಸರ್ವತ್ರ ಹರಡುವಂತಹ ಒಂದು ವಿಶಿಷ್ಟವಾದ ಅವಕಾಶವನ್ನು ಈ ಸೇವೆಯು ಒದಗಿಸುತ್ತದೆ. ಶ್ರುತಿ ಸ್ಮೃತಿಗಳು ಹೇಳುವಂತೆ ಗರ್ಭಗೃಹದಲ್ಲಿರುವ ಸ್ವಾಮಿಯನ್ನು ಆರಾಧಿಸುವುದರ ಮೂಲಕವಾಗಿ ಮಾತ್ರವೇ ಅಲ್ಲದೆ, ಆತನ ಭಕ್ತರ ಸೇವೆಯನ್ನು ಮಾಡುವುದರಿಂದಲೂ ದೈವಾನುಗ್ರಹವನ್ನು ಪಡೆಯಬಹುದು. ಹೀಗಾಗಿ "ಶ್ರೀವಾರಿ ಸೇವೆ"ಯು ಸ್ವಾಮಿಯ ಭಕ್ತರನ್ನು ನಿಸ್ವಾರ್ಥದಿಂದ ಸೇವಿಸುವುದರ ಮೂಲಕ ಶ್ರೀನಿವಾಸ ದೇವರ ಸೇವೆ ಮಾಡಿ ಅಧಿಕ ಫಲ ಪಡೆಯುವಂತೆ ಮಾಡುವುದು.

ಭಕ್ತರು ತಮ್ಮ ಸ್ವಯಂಸೇವೆಯನ್ನು ಕೆಳಕಂಡ ಕ್ಷೇತ್ರಗಳಲ್ಲಿ ಮಾಡಬಹುದಾಗಿದೆ-

1. ಅನ್ನದಾನ ಯೋಜನೆ, 2. ಸರತಿಯ ಸಾಲು, 3. ಕಲ್ಯಾಣಕಟ್ಟೆ, 4. ಕಾಲುಹಾದಿಯ ಯಾತ್ರಿಕರಿಗೆ ನೆರವು ನೀಡುವಿಕೆ, 5. ಸಾಮಾನುಗಳನ್ನು ಭದ್ರಗೊಳಿಸುವ ಕೋಣೆ, 6. ವಾಹನ ನಿಲ್ದಾಣ, 7. ಉಚಿತ ವಸ್ತು ಸಾಗಣೆ ಕೇಂದ್ರ, 8. ಸ್ವಾಮಿ ಪುಷ್ಕರಿಣಿ 9. ಸಮಾಚಾರ ಕೇಂದ್ರ, 10. ಶ್ರೀವಾರಿ ಆಲಯ.

ಯಾತ್ರಿಕರು ತಮ್ಮ ಅಪೇಕ್ಷೆ, ಆಸಕ್ತಿಗಳಿಗೆ ತಕ್ಕಂತೆ ಸೇವಾ ಕ್ಷೇತ್ರವನ್ನು ಆಯ್ಕೆ ಮಾಡಿಕೊಳ್ಳಬಹುದು. ಅನ್ನದಾನಂ ಭವನದಲ್ಲಿ ಕೆಲಸ ಮಾಡುತ್ತಿರುವ ಕೌಂಟರಿನಲ್ಲಿ ತಮ್ಮ ಹೆಸರನ್ನು ಕೂಡಲೇ ನೊಂದಾವಣೆ ಮಾಡಿಕೊಳ್ಳಬಹುದು. ಹತ್ತು ಮಂದಿಗೆ ಕಡಿಮೆಯಿಲ್ಲದಂತೆ ಒಂದು ಗುಂಪಿನಲ್ಲಿ ಒಂದು ವಾರಕ್ಕೆ ಕಡಿಮೆಯಾಗದಂತೆ ಸೇವೆ ಸಲ್ಲಿಸಬಯಸುವವರು ಮೊದಲೇ ತಿಳಿಸಿ ಸೇವೆಯಲ್ಲಿ ಭಾಗವಹಿಸಬಹುದು. ಇವರಿಗೆ ಉಚಿತ ವಸತಿ ಹಾಗೂ ಭೋಜನ ಸೌಕರ್ಯವನ್ನು ತಿರುಮಲೆಯಲ್ಲಿ ಒದಗಿಸಲಾಗುವುದು. ಭಜನ ಸಂಘಗಳೂ ಸ್ಫೂರ್ತಿದಾಯಕವಾದ ಈ ಸೇವೆಯಲ್ಲಿ ಭಾಗವಹಿಸಬಹುದು.

"ಶ್ರೀವಾರಿಸೇವೆ"ಯಲ್ಲಿ ಪಾಲು ಹಂಚಿಕೊಳ್ಳಬಯಸುವ ಯಾತ್ರಿಕ ಭಕ್ತರು ತಿರುಮಲೆಯ ಅನ್ನದಾನಂ ಸಮುದಾಯ ಭವನದಲ್ಲಿರುವ ಶ್ರೀವಾರಿ ಸೇವೆ ವಿಭಾಗದಲ್ಲಿ ತಮ್ಮ ಹೆಸರನ್ನು ನಮೂದಿಸಿಕೊಳ್ಳಬೇಕೆಂದು ಕೋರಲಾಗಿದೆ.

ಹೆಚ್ಚಿನ ವಿವರಗಳಿಗೆ : **ಶ್ರೀವಾರಿಸೇವೆ ವಿಭಾಗ ಅನ್ನದಾನಂ ಕಾಂಪ್ಲೆಕ್ಸ್ - ತಿರುಮಲ, ದೂರವಾಣಿ - 08574 - 79693.**

**ಪೌರಸಂಬಂಧಾಧಿಕಾರಿಗಳು,** ತಿ. ತಿ. ದೇವಸ್ಥಾನಗಳು - ತಿರುಪತಿ. **ದೂರವಾಣಿ - 08574 - 32813.**

**ಕಾರ್ಯನಿರ್ವಹಣಾಧಿಕಾರಿ**





ನಾರಾಯಣಾದ್ರಿ ಕೃತವಾಸ ಶರಣು
ತೋರಯ್ಯ ತವರೂಪ ರವಿಕೋಟಿ ಭಾಸ || ಪ ||

ಅನಂತ ಜನರಾಪ್ತ ನೀನೆಂದು ಕೇಳಿ ಮಿಗೆ
ಸಾನುರಾಗದಿ ನಡೆತಂದೆ ನಿನ್ನಯ ಬಳಿಗೆ
ಮೀನಾಂಕ ಜನಕ ತವ ಪದಯುಗಾರ್ಚನೆ ಹೀಗೆ
ಜ್ಞಾನ ಪೂರ್ವಕದಿಂದಲೆನಗೆ ದಯದಿ
ಪಾನೀಯಜಾಂಬಕನೆ ಪೊರೆಯೆಂದೆ ನಿನಗೆ || 1 ||

ವಾಸುಕೀ ತಪಕೆ ಸಲೆ ಮೆಚ್ಚಿ ಗಿರಿಯಲಿ ನಿಂದೆ
ಆ ಸಲಿಲದೊಳು ಮಿಂದು ಕರಿವರ ಕರೆಯೆ ಬಂದೆ
ವಾಸವಾತ್ಮಜನು ಬಿನ್ನೈಸೆ ನಿನ್ನಯ ಮುಂದೆ
ಆ ಸಮರದೊಳಗೊಲಿವೆನೆಂದೆ ನಿನಗೆ
ಪಾಸಟಿಯಾರು ನೀರಜಭವನ ತಂದೆ || 2 ||

ಪೊಗಳಲರಿಯರು ಜನರು ನಿನ್ನ ಮಹಿಮಾತಿಶಯ
ಬಗೆಯನರಿಯಳು ಲಕುಮಿ ಬದರಿ ಸನ್ನಿಧಿ ಕಾಯ
ಮುಗುಧ ಮಾನವ ತಿಳಿವೆನೇನೋ ತಿರುಮಲರೇಯ
ಖಗರಾಜಗಮನ ಕಮನೀಯ ಪಾಹಿ
ಜಗನ್ನಾಥ ವಿಠಲ ವಿಗತಾಘ ಅವಿಗೇಯ

- ಶ್ರೀ ಜಗನ್ನಾಥದಾಸರು.




ಸಂದರ್ಶಿಸಿ. ಆನಂದಿಸಿ.

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ
## ತಿರುಚಾನೂರು



# ವಾರ್ಷಿಕ ಬ್ರಹ್ಮೋತ್ಸವಗಳು

## 11-11-2001 ರಿಂದ 20-11-2001

### ಉತ್ಸವ ಕಾರ್ಯಕ್ರಮ

| ದಿನಾಂಕ | ವಾರ | ಹಗಲು ಉತ್ಸವ | ರಾತ್ರಿ ಉತ್ಸವ |
|---|---|---|---|
| 11-11-2001 | ಭಾನುವಾರ | - | ಸೇನಾಪತಿ ಉತ್ಸವ - ಅಂಕುರಾರ್ಪಣೆ. |
| 12-11-2001 | ಸೋಮವಾರ | ಧ್ವಜಾರೋಹಣ | ಚಿಕ್ಕ ಶೇಷವಾಹನ. |
| 13-11-2001 | ಮಂಗಳವಾರ | ಟಾಂಜಾನ್ ಉತ್ಸವ | ಹಂಸವಾಹನ. |
| 14-11-2001 | ಬುಧವಾರ | ಮುತ್ತಿನ ಚಪ್ಪರವಾಹನ. | ಸಿಂಹವಾಹನ |
| 15-11-2001 | ಗುರುವಾರ | ಕಲ್ಪವೃಕ್ಷವಾಹನ | ಹನುಮಂತವಾಹನ |
| 16-11-2001 | ಶುಕ್ರವಾರ | ಪಲ್ಲಕ್ಕಿ ಉತ್ಸವ | |
| | | ಸಂಜೆ - ವಸಂತೋತ್ಸವ | ಗಜವಾಹನ. |
| 17-11-2001 | ಶನಿವಾರ | ಸರ್ವಭೂಪಾಲವಾಹನ. | ಗರುಡವಾಹನ. |
| 18-11-2001 | ಭಾನುವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ. |
| 19-11-2001 | ಸೋಮವಾರ | ರಥೋತ್ಸವ | ಅಶ್ವವಾಹನ. |
| 20-11-2001 | ಮಂಗಳವಾರ | ತೀರ್ಥವಾರಿ, ಚಕ್ರಸ್ನಾನ. | ಧ್ವಜಾವರೋಹಣ. |

**ಸೂಚನೆ :** ತಿರುಚಾನೂರು ತಿರುಪತಿಯಿಂದ ಬಸ್‌ನಲ್ಲಿ ಹತ್ತು ನಿಮಿಷದ ಹಾದಿ. (ಐದು ಕಿ.ಮೀ.) ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತವೆ. ಹೆಚ್ಚಿನ ವಿವರಗಳಿಗೆ ತಮ್ಮ ಬಳಿಯ ತಿ.ತಿ.ದೇ. ಸಮಾಚಾರ ಕೇಂದ್ರದಲ್ಲಿ ವಿಚಾರಿಸಿ.

ನೀವೂ ಬನ್ನಿ. ನಿಮ್ಮವರನ್ನೂ ಕರೆತನ್ನಿ.





ಗೌರವ ಸಂಪಾದಕರು :
**ಡಾ|| ಪಿ. ಕೃಷ್ಣಯ್ಯ**, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ,
ತಿ.ತಿ.ದೇ. ತಿರುಪತಿ.

ಸಂಪಾದಕ :
**ಡಾ|| ಎನ್.ಎಸ್. ರಾಮಮೂರ್ತಿ**,

ಮುದ್ರಣ :
**ಐ. ಪಾರ್ವತೀಶ್ವರ ರಾವ್**,
ಬಿ.ಎ.,ಎಲ್.ಪಿ..ಟಿ.,
ಮ್ಯಾನೇಜರ್,
ತಿ.ತಿ.ದೇ. ಮುದ್ರಣಾಲಯ, ತಿರುಪತಿ.

ಉಪಸಂಪಾದಕ :
**ಬಿ. ಎನ್. ಶ್ರೀನಿವಾಸನ್**, ಎಂ.ಎ.

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ-
***ಸಂಪಾದಕರು***
***ತಿರುಮಲೆ ತಿರುಪತಿ ದೇವಸ್ಥಾನಗಳು,***
***ತಿರುಪತಿ.***

ಸಪ್ತಗಿರಿಯ ಎಲ್ಲ ಭಾಷೆಯ
ಪ್ರತಿಗಳೂ ಎಲ್ಲ
ತಿ.ತಿ.ದೇ.
ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ ರೂ. 5/-**
**ವಾರ್ಷಿಕ ಚಂದಾ ರೂ. 60/-**
**ಆಜೀವ ಚಂದಾ ರೂ. 500/-**


*ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. -ಸಂ||*

ವೇಂಕಟಾದ್ರಿ ಸಮಂಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ
ವೇಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ


**ಸಂಪುಟ - 32 ಅಕ್ಟೋಬರ್ 2001 ಸಂಚಿಕೆ - 5**


# ನವರಾತ್ರಿ ಸಂಚಿಕೆ

## ವಿಷಯಸೂಚಿ


| | | |
|---|---|---|
| ಸಂಪಾದಕೀಯ | | 4 |
| ಪುರಾಣಗಳಲ್ಲಿ ಶ್ರೀನಿವಾಸ | ಕೆ. ಅಪ್ಪಣ್ಣಾಚಾರ್ಯ | 5 |
| ಅನ್ನಮಯ್ಯ - ವೆಂಕಟೇಶ | ಡಾ|| ಕೆ. ಸರ್ವೋತ್ತಮರಾವ್ | 9 |
| ದೇಶಿಕರು ಮತ್ತು ದಯಾನಿಧಿ | ಪ್ರೊ|| ಸಿ. ಗೋವಿಂದಾಚಾರ್ | 11 |
| ಆನಂದದ ದಶರೆ ಹಬ್ಬ | ಅ.ಚಿ. ಜ್ಯೋತಿಷೀ | 15 |
| ಸರಸ್ವತೀ - ನದೀ ವಿಚಾರ | ಆದ್ಯರಾಮಾಚಾರ್ಯ | 17 |
| ಪಾದಗಳ ಮಂಟಪದ ಮಟ್ಲಕುಮಾರ | ಬಿ.ಎನ್.ಎಸ್. | 19 |
| ಎಸ್. ವಿ. ಡೈರಿ ಫಾರಂ | | 31 |
| ಶ್ರೀ ವಾರಿ ಸೇವೆ | ಸಮೀಕ್ಷೆ | 33 |
| ವೇದಗಳ ವಿಷ್ಣು | ಕೆ. ಕೇಶವನ್ | 35 |
| ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ | ಡಾ|| ಎನ್. ರಮೇಶನ್ | 39 |
| ವಾರ್ತಾಲಹರಿ | | 45 |


ರಕ್ಷಾಪತ್ರ : ***ಶ್ರೀ ಭೂದೇವಿಯರೊಡನೆ ಶ್ರೀ ಮಲೆಯಪ್ಪಸ್ವಾಮಿ.***
ಹಿಂಬದಿಯಲ್ಲಿ : ***ಶ್ರೀ ಮಹಾಲಕ್ಷ್ಮಿ - ಚಿತ್ರ - ಶಿವಪ್ರಸಾದ್.***

# ನಿಮ್ಮೊಡನೆ ಎರಡು ಮಾತು......



ವೆಂಕಟಾದ್ರಿ ಸಮಂ ಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ
ವೆಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ

ಆದಿ ಮಧ್ಯಾಂತರಹಿತನಾದ ಆ ಶ್ರೀ ವೆಂಕಟೇಶ್ವರಸ್ವಾಮಿಯು ನೆಲೆಸಿದ ವೆಂಕಟಾದ್ರಿಗೆ ಸಮನಾದ ಸ್ಥಳ ಈ ಬ್ರಹ್ಮಾಂಡದಲ್ಲಿ ಬೇರೆಲ್ಲಿಯೂ ಇಲ್ಲ. ಕಲಿಯುಗ ವೈಕುಂಠವಾದ ಶ್ರೀನಿವಾಸನ ನಿವಾಸ ತಿರುಮಲೆ, ಸಮಸ್ತ ದೇವತೆಗಳಿಗೆ, ಋಷಿಪುಂಗವರಿಗೆ, ಸರ್ವತೀರ್ಥಗಳಿಗೆ ನಿವಾಸವೆಂದರೂ ಸರಿಯೆ.

ತಿರುಮಲೆಯಲ್ಲಿ ನೆಲೆಸಿದ ಆ ವೇದ ವೇದ್ಯನಿಗೆ ನಿತ್ಯವೂ ಹಬ್ಬವೇ. ಆ ಉತ್ಸವಗಳಲ್ಲಿ ಅತ್ಯಂತ ವಿಶಿಷ್ಟವಾದದ್ದು ಬ್ರಹ್ಮೋತ್ಸವ. ಬ್ರಹ್ಮನ ನೇತೃತ್ವದಲ್ಲಿ ನಡೆಯುವ ಈ ಬ್ರಹ್ಮೋತ್ಸವಗಳಿಗೆ ದೇಶದ ನಾಲ್ಕೂ ಮೂಲೆಗಳಿಂದ ಲಕ್ಷಾಂತರ ಮಂದಿ ಭಕ್ತರು ಬರುತ್ತಾರೆ. ಶ್ರೀನಿವಾಸನ ದರ್ಶನಾರ್ಥ ತಿರುಮಲೆಯಲ್ಲಿ ಸೇರುತ್ತಾರೆ. ಉತ್ಸವ ಸಮಯದಲ್ಲಿ ಶುಭಂಕರವಾದ ಬೀದಿ ಮೆರವಣಿಗೆಯಲ್ಲಿ ಬರುವ ಶ್ರೀನಿವಾಸನ ದರ್ಶನದಿಂದ ಇಹ ಪರ ಸುಖವೆಂಬುದು ನಂಬಿಕೆ - ಭರವಸೆ - ಸಿದ್ಧಾಂತ. ಹಾಗೆಂದೇ ಬ್ರಹ್ಮೋತ್ಸವಗಳೆಂದರೆ ಎಲ್ಲರಿಗೂ ಉತ್ಸವವೇ.

ಈ ಬಾರಿಯ ಅಧಿಕ ಮಾಸದ ಕಾರಣದಿಂದಾಗಿ ಸ್ವಾಮಿಗೆ ಎರಡು ಬ್ರಹ್ಮೋತ್ಸವ. ಎರಡನೆಯದಾದ ನವರಾತ್ರಿ ಬ್ರಹ್ಮೋತ್ಸವಗಳು ಅಕ್ಟೋಬರ್ ಹದಿನೇಳರಿಂದ ಇಪ್ಪತ್ತೈದರವರೆಗೆ ನಡೆಯುತ್ತವೆ. ಭಕ್ತರಿಗೆಲ್ಲ ಎಲ್ಲರೀತಿಯ ಸೌಕರ್ಯಗಳನ್ನು ಕಲ್ಪಿಸಿಕೊಡಲು ದೇವಸ್ಥಾನ ಅವಿಶ್ರಾಂತ ಕೃಷಿ ನಡೆಸಿದೆ. ಈ ಒಂದು ಪ್ರಯತ್ನ ಸಫಲವಾಗುವಲ್ಲಿ ಭಕ್ತರ ಸಹಕಾರದ ಸಹಾಯವೂ ಅತ್ಯಂತ ಅಗತ್ಯ.

ಪರಮ ಪವಿತ್ರವೂ ಪುಣ್ಯಪ್ರದವೂ, ಪಾವನವೂ ಆದ ತಿರುಮಲೆಯನ್ನು ಅಷ್ಟೇ ಪವಿತ್ರವಾಗಿ ಪರಿಶುಭ್ರವಾಗಿ ಇಡುವ ಜವಾಬ್ದಾರಿ ನಮ್ಮೆಲ್ಲರ ಮೇಲಿದೆ. ತಿರುಮಲೆಯಲ್ಲಿರುವಾಗ ನಮ್ಮ ಮನಸ್ಸಿನೊಡನೆಯೇ ಪರಿಸರವನ್ನೂ ಪರಿಶುದ್ಧವಾಗಿಟ್ಟುಕೊಳ್ಳಬೇಕು. ಪರಿಶುದ್ಧತೆಯಲ್ಲಿ ಪರಮಾತ್ಮನಿರುವನೆಂದು ಪರಂಪರೆ ಹೇಳುತ್ತದೆ. ಕಾಟೇಜಿನಲ್ಲಿರಲಿ, ಉಚಿತ ಸತ್ರದಲ್ಲಿರಲಿ, ಸ್ವಾಮಿ ದರ್ಶನದ ಸರತಿಯ ಸಾಲಿನಲ್ಲಿ ಸಾಗಿ ಹೋಗುತ್ತಿರಲಿ - ಈ ಪರಿಶುಭ್ರತೆಗೆ ಪ್ರಾಧಾನ್ಯ ನೀಡಬೇಕು. ಸ್ಮರಿಸಿದರೇನೆ ಪಾಪ ಪಂಕಿಲವನ್ನು ತೊಳೆಯುವ ಪನ್ನಗಾದ್ರಿಯಲ್ಲಿರುವಾಗ ಪರಿಶುಭ್ರತೆಯನ್ನು ಮರೆತರೆ ಹೇಗೆ? ಆ ಸ್ವಾಮಿಯ ಸೇವೆಯಲ್ಲಿ ಈ ಪರಿಶುದ್ಧತೆಯೂ ಒಂದು ಭಾಗವೇ.

ಅಷ್ಟೇ ಅಲ್ಲ; ನೀರು ವಿದ್ಯುತ್ - ಮೊದಲಾದ ವಿಷಯಗಳಲ್ಲಿಯೂ ಉಳಿತಾಯವನ್ನು ಸಾಧಿಸುವುದು ಅಗತ್ಯ. ನೀರು - ಸಮಸ್ತ ಪ್ರಾಣಿಕೋಟಿಯ ಜೀವನಾಧಾರವೆಂಬುದು ತಿಳಿದದ್ದೇ. ಒಂದು ತೊಟ್ಟು ನೀರನ್ನು ಉಳಿಸಿದರೂ ಅದು ನೆರೆಯವರ ಜೀವವನ್ನು ಉಳಿಸಬಲ್ಲದು. ಈ ಉಳಿತಾಯವೂ ಸಹ ಒಂದು ರೀತಿಯ ತ್ಯಾಗವೇ. ಈ ತ್ಯಾಗ - ಈ ಮೂಲಕವಾದ ಮಾನವಸೇವೆ ಪರಮಾತ್ಮನಿಗೆ ಇಷ್ಟವಾದದ್ದೇ. ಲಕ್ಷಾಂತರ ಮಂದಿ ಒಂದೆಡೆ ಸೇರಿದಾಗ ಆಹಾರ ಪದಾರ್ಥಗಳು ನೀರು ವ್ಯರ್ಥವಾಗುವುದು ಸಾಧಾರಣವೇ ಆದರೂ, ಅಂತಹ ವ್ಯರ್ಥಗೊಳಿಸುವಿಕೆಯನ್ನು ತಡೆಯ ಬೇಕು. ಎಲ್ಲರೂ ಉದಾರ ಮನಸ್ಸಿನಿಂದ ಯೋಚಿಸಿ ಉಳಿತಾಯದ ಉದ್ಯಮದಲ್ಲಿ ಪಾಲು ಪಡೆಯಬೇಕು.

ಆ ದೇವದೇವನ ಸನ್ನಿಧಿಯಾದದ್ದರಿಂದ - ನೀರು ತಗ್ಗು ಮುಖವಾಗಿ ಹರಿಯುವುದೆಂಬ ನಾಣ್ನುಡಿಯ ವಿರುದ್ಧವಾಗಿ ನೀರು ಮೇಲೇರಿ, ಬೆಟ್ಟದಿಂದ ಬಯಲಿಗಿಳಿಯುವ ಗಂಗೆ ಪ್ರಪಂಚದಲ್ಲಿಯೇ ಮೊದಲಬಾರಿಗೆ ಬಯಲಿನಿಂದ ಬೆ ಟ್ಟವೇರಿ, ಸ್ವಾಮಿ ಪಾದದಲ್ಲಿ ಹುಟ್ಟಿದ ಗಂಗೆ ಸ್ವಾಮಿ ಪಾದವನ್ನು ಸೇರುತ್ತಾಳೆ. ಇಂತಹ ಪವಿತ್ರವಾದ ಗಂಗೆಯನ್ನು ನಾವೂ ಪವಿತ್ರವಾಗಿ ಕಂಡು ಹಾಗೆಯೇ ಬಳಸಬೇಕು.

ಪರ್ವದಿನಗಳಲ್ಲಿ ಸ್ವಾಮಿಯನ್ನು ಆರಾಧಿಸಲು ದರ್ಶಿಸಲು ಬರುವವರಿಗೂ, ಬರಲಾಗದೆ ಮನದಲ್ಲಿಯೇ ನಮನ ಸಲ್ಲಿಸುವ ಭಕ್ತರಿಗೂ - ಎಲ್ಲರಿಗೂ ಸಪ್ತಗಿರಿಯ ಸ್ವಾಮಿ ಕರುಣೆಯಿಂದ ಅನುಗ್ರಹಿಸಲೆಂದು ಬಯಸುತ್ತ.....

ಡಾ॥ ಪಿ. ಕೃಷ್ಣಯ್ಯ.
ಕಾರ್ಯನಿರ್ವಹಣಾಧಿಕಾರಿ.
ತಿ.ತಿ.ದೇ.

# ಪುರಾಣಗಳಲ್ಲಿ ಶ್ರೀನಿವಾಸ

- ಕೆ. ಅಪ್ಪಣ್ಣಾಚಾರ್ಯ.

ವೇದೇಷು ಚ ಪುರಾಣೇಷು
ವೇಂಕಟೇಶ ಕಥಾಮೃತಮ್ ।
ವರ್ಣಿತಂ ಚೇತಿಹಾಸೇಷು
ಭಾರತಾದ್ಯಾಗಮೇಷು ಚ ॥

ಈ ಶ್ಲೋಕ ಶ್ರೀನಿವಾಸನಿಗೂ ವೇದಪುರಾಣೇತಿಹಾಸಗಳಿಗೂ ಇರುವ ಸಂಬಂಧವನ್ನು ಎತ್ತಿತೋರುತ್ತದೆ. ಶ್ರೀನಿವಾಸನ ದಿವ್ಯ ಚರಿತ್ರೆಯು ಪ್ರಾಯಃ ಎಲ್ಲಾ ಪುರಾಣಗಳಲ್ಲಿ ವರ್ಣಿತವಾಗಿದೆ. ಒಂದು ಪುರಾಣದಲ್ಲಿ ಬೆಟ್ಟದಲ್ಲಿರುವ ಕೆಲವು ತೀರ್ಥಗಳ ಪ್ರಾಶಸ್ತ್ಯವರ್ಣನೆ ಪ್ರಧಾನವಾದರೆ, ಮತ್ತೊಂದು ಪುರಾಣದಲ್ಲಿ ಪರ್ವತದ ನಾಮೇತಿಹಾಸಗಳ ವರ್ಣನೆಯು ಮುಖ್ಯಸ್ಥಾನವನ್ನು ಪಡೆದಿರುತ್ತದೆ. ಕೆಲವು ಪುರಾಣಗಳಲ್ಲಿ ಶ್ರೀನಿವಾಸನ ಸೇವೆಯಿಂದ ಜನ್ಮ ಧನ್ಯಮಾಡಿಕೊಂಡ ಪೂತಾತ್ಮರ ಚರಿತ್ರೆಗಳು ಪ್ರಮುಖಪಾತ್ರ ವಹಿಸಿವೆ. ಶ್ರೀನಿವಾಸನ ಕಲ್ಯಾಣಮಹೋತ್ಸವದ ವರ್ಣನೆಯು ಭವಿಷ್ಯೋತ್ತರ ಹಾಗೂ ವರಾಹ ಈ ಎರಡರಲ್ಲಿ ಮಾತ್ರ ವಿಶೇಷವಾಗಿ ವರ್ಣಿತವಾಗಿದೆ. ಹೀಗೆ ಶ್ರೀನಿವಾಸನಿಗೆ ಸಂಬಂಧಿಸಿದ ಒಂದೊಂದು ವಿಷಯ ಒಂದೊಂದು ಪುರಾಣದಲ್ಲಿ ವಿಶೇಷವಾಗಿ ವರ್ಣಿತವಾಗಿದೆ. ಒಂದೇ ಇತಿವೃತ್ತಕ್ಕೆ ಸಂಬಂಧಿಸಿದ ಹಲವಾರು ವಿಷಯಗಳನ್ನು ಬೇರೆ ಬೇರೆ ಪುರಾಣಗಳಲ್ಲಿ ಸಂದರ್ಭ ಸಂದರ್ಭಕ್ಕನುಗುಣವಾಗಿ ವರ್ಣಿಸುವುದು ನಮ್ಮ ಪುರಾಣರಚನೆಯ ಒಂದು ಪ್ರಕ್ರಿಯೆ. ಪ್ರಹ್ಲಾದನ ಚರಿತ್ರೆಯು ಕೇವಲ ಭಾಗವತ ಸಪ್ತಮಸ್ಕಂಧದಲ್ಲಿ ಮಾತ್ರ ಬರುವುದಿಲ್ಲ, ವಾಮನ, ವಿಷ್ಣು ಪುರಾಣಗಳಲ್ಲೂ ಆತನ ಚರಿತ್ರೆಯು ಸ್ಥಾನಗಳಿಸಿದೆ. ಈ ಮೂರು ಪುರಾಣಗಳಲ್ಲಿರುವ ಆ ಭಾಗವತೋತ್ತಮನ ಚರಿತ್ರೆಯನ್ನು ಒಟ್ಟುಗೂಡಿಸಿದಾಗಲೇ ಆತನ ಚರಿತ್ರೆಗೆ ಪೂರ್ಣತೆಯು ಸಿದ್ಧಿಸುವುದು. ನಮ್ಮ ಪುರಾಣಗಳ ಪರಿಚಯವಿರುವವರಿಗೆ ಇದು ಹೊಸತಲ್ಲ. ಶ್ರೀನಿವಾಸನ ಚರಿತ್ರೆಯು ಪ್ರಧಾನವಾಗಿ ವರಾಹ, ಬ್ರಹ್ಮಾಂಡ ಪುರಾಣಗಳು ಜೊತೆಗೆ ಸ್ಕಾಂದ, ಆದಿತ್ಯ, ಭವಿಷ್ಯೋತ್ತರ, ಪದ್ಮ, ಗರುಡ, ಹರಿವಂಶ, ಮಾರ್ಕಂಡೇಯ, ವಾಮನ ಪುರಾಣಗಳಲ್ಲಿ ಕಂಡು ಬರುವುದು. ಅವುಗಳನ್ನು ಹೀಗೆ ಪರಿಶೀಲಿಸಬಹುದು.

ವರಾಹ :- ಈ ಪುರಾಣದಲ್ಲಿ 40 ಅಧ್ಯಾಯಗಳಲ್ಲಿ ಶ್ರೀ ವೆಂಕಟಾಚಲ ಮಾಹಾತ್ಮ್ಯವು ವರ್ಣಿತವಾಗಿದೆ. ಪ್ರಾರಂಭದಲ್ಲಿ ಶ್ವೇತ ವರಾಹಕಲ್ಪ, ಹಿರಣ್ಯಾಕ್ಷನವಧೆ, ವೈಕುಂಠದಿಂದ ಬಂದ ಕ್ರೀಡಾಪರ್ವತ, ಆ ಪರ್ವತಕ್ಕೆ ಕಾರಣಾಂತರಗಳಿಂದ ಬಂದ ಹೆಸರುಗಳು, ಕುಮಾರಧಾರಾ ಸ್ನಾನದಿಂದ ಒದಗುವ ಫಲ - ಇವುಗಳನ್ನು ಕುರಿತು ವಿವರಿಸಿ, ವೃದ್ಧ ಬ್ರಾಹ್ಮಣನ, ಶಂಖಣನೃಪನ, ಆತ್ಮಾರಾಮನೆಂಬ ಬ್ರಾಹ್ಮಣನ ಕಥೆಗಳನ್ನು ವರ್ಣಿಸಿದ್ದಾರೆ. ಮುಂದೆ ಕಪಿಲಾದಿ ಸಪ್ತದಶ ತೀರ್ಥಗಳ, ಪಾಂಡವತೀರ್ಥದ, ಜರಾಹರಾದಿ ಮೂರು ತೀರ್ಥಗಳ ಮಹಾತ್ಮೆಯನ್ನು ಹೇಳಿ, ದಶರಥ ರಾಮಚಂದ್ರರು ವೆಂಕಟಾದ್ರಿಗೆ ಬಂದು ಸೇವೆ ಸಲ್ಲಿಸಿದುದನ್ನು ವರ್ಣಿಸಿರುವರು. ನಂತರ



ವೆಂಕಟೇಶನಿಗೆ ಬ್ರಹ್ಮದೇವರು ಮಾಡಿದ ಉತ್ಸವಕಾರ್ಯಕ್ರಮವನ್ನೂ, ಧರ್ಮ ಸಂರಕ್ಷಣೆಗಾಗಿ ಶ್ರೀನಿವಾಸನು ಸುದರ್ಶನ ಚಕ್ರವನ್ನು ಕಳುಹಿಸಿ ನಾಲ್ಕು ದಿಕ್ಕುಗಳಲ್ಲಿರುವ ದೈತ್ಯರನ್ನು ಸಂಹರಿಸಿದ ವೃತ್ತಾಂತವನ್ನೂ ಹೇಳಿರುವರು. ವೆಂಕಟೇಶ್ವರ ಅಷ್ಟೋತ್ತರ ಶತನಾಮಾವಳಿಯೇ ಮೊದಲಾದ ಸ್ತೋತ್ರಗಳನ್ನೂ, ಸನಕ ಸನಂದನಾದಿ ತೀರ್ಥಗಳ ಮಹಾತ್ಮೆಯನ್ನೂ ವಿವರಿಸಿ, ಆಕಾಶರಾಜನ ಚರಿತ್ರೆಯಿಂದ ಹಿಡಿದು ಶ್ರೀನಿವಾಸ ಕಲ್ಯಾಣದವರೆಗೆ ಪೂರ್ಣವಾಗಿ ಬಣ್ಣಿಸಿರುವರು. ಕೊನೆಯಲ್ಲಿ ವಸುನಾಮಕ ನಿಷಾದ, ರಂಗದಾಸ, ತೊಂಡಮಾನ್, ವೀರಶರ್ಮ ಬ್ರಾಹ್ಮಣ, ಕುರ್ವಗ್ರಾಮದಿಂದ ಬಂದ ಭೀಮ - ಇವರುಗಳ ಚರಿತ್ರೆಯನ್ನೂ, ಶ್ರೀನಿವಾಸನ ಸೇವೆಯಿಂದ ಅವರು ಹೊಂದಿದ ಫಲವನ್ನೂ ವರ್ಣಿಸಿರುವರು.

ಬ್ರಹ್ಮಾಂಡ :- ಈ ಪುರಾಣದಲ್ಲಿ ಶ್ರೀ ವೆಂಕಟಾಚಲ ಮಹಾತ್ಮೆಯು ಬೇರೆ ಬೇರೆ ವ್ಯಕ್ತಿಗಳಿಂದ ವರ್ಣಿತವಾಗಿದೆ. ಮೊದಲನೆಯ ಭಾಗದಲ್ಲಿ 10 ಅಧ್ಯಾಯಗಳಲ್ಲಿ ಈ ಕಥೆಯು ಪ್ರತಿಪಾದಿತವಾಗಿದೆ. ಇಲ್ಲಿ ದಿಲೀಪ ಮಹಾರಾಜನನ್ನು ಕುರಿತು ದುರ್ವಾಸರು ಕಥೆಯನ್ನು ಹೇಳುವರು.

ವೆಂಕಟಾಚಲದ ವೈಭವ, ಕ್ಷೀರಸಾಗರದಲ್ಲಿ ವಾಯು ಶೇಷರ ಮಧ್ಯದಲ್ಲಿ ನಡೆದ ವಿವಾದ, ಶೇಷನ ತಪಸ್ಸಿಗೆ ಮೆಚ್ಚಿದ ಶ್ರೀನಿವಾಸನು ಆತನ ಪ್ರಾರ್ಥನೆಯಂತೆ ವೆಂಕಟಾಚಲದಲ್ಲಿ ಬಂದು ನಿಲ್ಲುವುದು, ಅಗಸ್ತ್ಯರ ತಪಸ್ಸು, ಶಂಖನೆಂಬ ರಾಜನ ಸೇವೆ, ಭಗವದಾಜ್ಞೆಯಂತೆ ಅವನು ನಿರ್ಮಿಸಿದ ವಿಮಾನದ ವರ್ಣನೆ, ಸ್ವಾಮಿ ತೀರ್ಥವೇ ಮೊದಲಾದ ತೀರ್ಥಗಳ ವರ್ಣನೆ, ತೊಂಡಮಾನ್ ರಾಜನ ಚರಿತ್ರೆ, ಅವನು ಶ್ರೀನಿವಾಸನಿಗೆ ಸಲ್ಲಿಸಿದ ಸೇವೆ, ಶ್ರೀನಿವಾಸನ ಅನುಗ್ರಹ ಇವುಗಳನ್ನು ವಿವರಿಸಿರುವರು. ಕೊನೆಯಲ್ಲಿ ಶ್ರೀ ಭೂವರಾಹನ ಮಹಾತ್ಮೆ, ತೀರ್ಥ ಯಾತ್ರೆಯ ಪ್ರಾಶಸ್ತ್ಯ ತಿರುಮಲೆಯಲ್ಲಿ ಮಾಡಬೇಕಾದ ದಾನಗಳು, ಅದರಿಂದುಂಟಾಗುವ ಫಲಗಳು, ವೇದನೆಂಬ ಬ್ರಾಹ್ಮಣನ ಚರಿತ್ರೆ ವರ್ಣಿತವಾಗಿವೆ.

ಎರಡನೆಯ ಭಾಗದಲ್ಲಿ 11 ಅಧ್ಯಾಯಗಳಲ್ಲಿ ವಿಭಕ್ತವಾದ ಕಥಾಭಾಗವು ಭೃಗು ನಾರದ ಸಂವಾದಾತ್ಮಕವಾಗಿರುವುದು. ಮೊದಲನೆಯ ಅಧ್ಯಾಯದಲ್ಲಿ ವೆಂಕಟಾಚಲಕ್ಕಿರುವ ನಾಮಾಂತರಂಗಳನ್ನು ಅವುಗಳ ಪ್ರಾಶಸ್ತ್ಯವನ್ನೂ, ಭಗವಂತನ ಮಹಿಮೆಯನ್ನೂ, ಆ ಸ್ವಾಮಿಯ ವಿಹಾರಕ್ಕೆ ಯೋಗ್ಯವಾದ ಸ್ಥಾನವನ್ನೂ ಕುರಿತು ಹೇಳಿ, ಎರಡನೆಯ ಅಧ್ಯಾಯದಲ್ಲಿ ಭಗವಂತನು ಕ್ರೀಡಾಪರ್ವತದ ರೂಪವನ್ನು ಹೊಂದಿ ಶೋಭಿಸಿದ ಬಗೆಯನ್ನು ಹೇಳುವರು. ಮೂರನೇ ಅಧ್ಯಾಯದಲ್ಲಿ ಶ್ರೀನಿವಾಸನ ಅನುಗ್ರಹಕ್ಕೆ ಪಾತ್ರನಾದ ನಾರಾಯಣನೆಂಬ ಬ್ರಾಹ್ಮಣನ ವೃತ್ತಾಂತವನ್ನು, ನಾಲ್ಕನೆಯದರಲ್ಲಿ ಶ್ರೀನಿವಾಸನು ಬೇಟೆಯಾಡುತ್ತಾ ವೃಷಭನೆಂಬ ದೈತ್ಯನನ್ನು ಸಂಹರಿಸಿ ಕ್ರೀಡಾದ್ರಿಗೆ ವೃಷಭಾಚಲವೆಂದು ಹೆಸರಿಟ್ಟದ್ದನ್ನು, ಐದನೆಯ ಅಧ್ಯಾಯದಲ್ಲಿ ಅಂಜನಾದೇವಿಯ ತಪಸ್ಸನ್ನು, ಹನುಮಂತನ ಚರಿತ್ರೆಯನ್ನು, ಆರನೆಯ ಅಧ್ಯಾಯದಲ್ಲಿ ಕ್ರೀಡಾದ್ರಿಗೆ ವೆಂಕಟಾಚಲವೆಂದು ಹೆಸರು ಬರಲು ಕಾರಣವನ್ನು, ಏಳನೆಯ ಅಧ್ಯಾಯದಲ್ಲಿ ಚೋಳರಾಜನ ವೃತ್ತಾಂತವನ್ನು, ಎಂಟನೆಯ ಅಧ್ಯಾಯದಲ್ಲಿ ಚೋಳರಾಜನು ತನ್ನ ಮಗನಿಗೆ ಪಟ್ಟಾಭಿಷೇಕಮಾಡಿ ಚಕ್ರವರ್ತಿ ಎಂಬ ಹೆಸರಿನಿಂದ ಕರೆಯುವುದನ್ನು, ಹುತ್ತದಲ್ಲಿರುವ ಸ್ವಾಮಿಯನ್ನು ಕುರಿತು ಗೋಪಾಲಕರು ಚಕ್ರವರ್ತಿಗೆ ತಿಳಿಸುವುದನ್ನು, ಹತ್ತನೆಯ ಅಧ್ಯಾಯದಲ್ಲಿ ಚಕ್ರವರ್ತಿಯ ಭಕ್ತಿಗೆ ಮೆಚ್ಚಿ ಪ್ರತ್ಯಕ್ಷನಾದ ಭಗವಂತನು ರಾಜನಿಗೆ ಅಲ್ಲಿಯೇ ಶಾಶ್ವತವಾಗಿ ನಿಲ್ಲುವಂತೆ ವರಕೊಡುವುದನ್ನು, ಚಕ್ರವರ್ತಿಯು ನಿರ್ವಹಿಸಿದ ಶ್ರೀನಿವಾಸನ ಬ್ರಹ್ಮೋತ್ಸವದ ವೈಭವವನ್ನೂ ಹತ್ತು, ಹನ್ನೊಂದನೆಯ ಅಧ್ಯಾಯಗಳಲ್ಲಿ ಕೃಷ್ಣಶರ್ಮನೆಂಬ ಬ್ರಾಹ್ಮಣನ, ಸಿಂಹದನೆಂಬ ರಾಕ್ಷಸನ ವೃತ್ತಾಂತಗಳನ್ನು ವರ್ಣಿಸಿರುವರು.

ಬ್ರಹ್ಮೋತ್ತರ ಖಂಡ :- ಇಲ್ಲಿ ಘೋಣತೀರ್ಥದ ವೈಶಿಷ್ಟ್ಯವು ಮಾತ್ರ ವರ್ಣಿತವಾಗಿದೆ. ಪೌರೋಹಿತ್ಯದ ನಿರ್ವಹಣೆಯಿಂದ ಸಂಕ್ರಮಿಸಿದ ಪಾಪವನ್ನು ಕಳೆದುಕೊಳ್ಳಲು ವಶಿಷ್ಠನು ಬ್ರಹ್ಮನ ಬಳಿಗೆ ಬಂದು ಪ್ರಾರ್ಥಿಸುವನು. ವಿಧಾತನು ವಶಿಷ್ಠನನ್ನು ಕುರಿತು ವೆಂಕಟಾಚಲ ಪರ್ವತವನ್ನು ಸೇರಿ ಅಲ್ಲಿರುವ ಘೋಣ ತೀರ್ಥದಲ್ಲಿ ಸ್ನಾನ ಮಾಡುವಂತೆ ಆದೇಶಿಸುವನು. ಮಹರ್ಷಿಯು ಘೋಣತೀರ್ಥದಲ್ಲಿ ಸ್ನಾನ ಮಾಡಿ ಶ್ರೀನಿವಾಸನ ಅನುಗ್ರಹದಿಂದ ಸಕಲ ಪಾಪಗಳಿಂದ ವಿಮುಕ್ತನಾಗುವನು.

ಸ್ಕಾಂದ :- ಪ್ರಾರಂಭದಲ್ಲಿ ಸ್ವಾಮಿ ಪುಷ್ಕರಿಣಿಯ ಮಹಿಮೆ, ಅದರ ಸ್ನಾನದಿಂದ ಪೂತರಾದ ಕಶ್ಯಪ, ಪರೀಕ್ಷಿತ, ಧರ್ಮಗುಪ್ತ, ಸುಮತಿಯರ ಚರಿತ್ರೆಗಳು ವಿವರಿತವಾಗಿವೆ. ನಂತರ ರಾಮಕೃಷ್ಣತೀರ್ಥದ ಮಹಾತ್ಮೆ, ವೆಂಕಟಾಚಲದ ವೈಭವ, ಅದನ್ನು ಹತ್ತುವಾಗ ಆಚರಿಸಬೇಕಾದ ಪದ್ಧತಿ, ಪಾಪವಿನಾಶ ತೀರ್ಥದ ಸ್ನಾನದಿಂದ ಸುಮತಿ ಮತ್ತು ಭದ್ರಮತಿಯರಿಗಾದ ಸುಖ, ಆಕಾಶಗಂಗೆಯ ಮಹಾತ್ಮೆ, ಚಕ್ರತೀರ್ಥ, ಜಾಬಾಲಿತೀರ್ಥ, ತುಂಬುರುತೀರ್ಥ (ಘೋಣತೀರ್ಥ) ಕಟಾಹತೀರ್ಥ, ಶಂಖತೀರ್ಥ ಇವುಗಳ ವೃತ್ತಾಂತ, ಪ್ರಾಶಸ್ತ್ಯ ಸ್ನಾನಫಲಾದಿಗಳು ವರ್ಣಿತವಾಗಿವೆ.

ಆದಿತ್ಯ ಪುರಾಣ :- ಇದು ಐದು ಅಧ್ಯಾಯಗಳಿಂದ ಕೂಡಿದ ಶ್ರೀನಿವಾಸನ ಸ್ತೋತ್ರಾತ್ಮಕವಾದ ಕೃತಿ. ವಾಯು ಶಿಷ್ಯನಾದ ದೇವಶರ್ಮನೆಂಬ ಬಡಬ್ರಾಹ್ಮಣನು ಗುರುಗಳ ಆದೇಶಾನುಸಾರ ವೆಂಕಟಾಚಲವನ್ನು ಸೇರಿ ಆನಂದಜ್ಞಾನದನೂ, ಆನಂದಮಯ ನಾಮಕನೂ, ಆನಂದನಿಲಯವಾಸಿಯೂ ಆದ ಶ್ರೀನಿವಾಸನನ್ನು ಕಂಡು ನಮಿಸಿ ''ದಯಾನಿಧೇ ದಯಾನಿಧೇ'' ಎಂದು ಸ್ತೋತ್ರಮಾಡುವನು. ಮೂರನೆಯ ಅಧ್ಯಾಯದಲ್ಲಿ ಶ್ರೀನಿವಾಸನ ನಾನಾವತಾರಗಳನ್ನು, ನಾಲ್ಕನೆಯ ಅಧ್ಯಾಯದಲ್ಲಿ ಆ ಪ್ರಭುವಿನ ನಾಮ ಮಹಾತ್ಮೆಯನ್ನು, ವರ್ಣಿಸಿ ಕೊನೆಯದಾದ ಐದನೆಯ ಅಧ್ಯಾಯದಲ್ಲಿ, ತನ್ನ ದೀನಸ್ಥಿತಿಯನ್ನು ಹೇಳಿಕೊಂಡು, ಕಾಯೇನ, ವಾಚಾ, ಮನಸಾ ತನ್ನ ಸರ್ವಸ್ವವನ್ನು ಸ್ವಾಮಿಯ ಪಾದಾರವಿಂದಗಳಲ್ಲಿ ಸಮರ್ಪಿಸುವನು. ದೇವಶರ್ಮನ ಸ್ತೋತ್ರಕ್ಕೆ

ಮೆಚ್ಚಿದ ಶ್ರೀನಿವಾಸನು ಪ್ರತ್ಯಕ್ಷನಾಗಿ ಐಹಿಕಪಾರತ್ರಿಕ ಸುಖಗಳನ್ನು ಕರುಣಿಸುವನು.

ಎಲ್ಲಾ ಪುರಾಣಗಳಲ್ಲೂ ಭಗವಂತನ, ಅವನ ನಾಮದ ಮಹಾ ಮಹಿಮೆಯು ವರ್ಣಿತವಾಗಿವೆ. ಈ ಎಲ್ಲದರ ಸಾರ ಈ ಸ್ತೋತ್ರದಲ್ಲಡಕವಾಗಿರುವುದು. ಇಂಥಾ ಸುಂದರವಾದ ಸುದೀರ್ಘವಾದ ಶ್ರೀನಿವಾಸನಿಗೆ ಸಂಬಂಧಿಸಿದ ಸ್ತೋತ್ರ ಪ್ರಕ್ರಿಯೆಯು ಯಾವ ಪುರಾಣದಲ್ಲೂ ಕಂಡು ಬರುವುದಿಲ್ಲ.

**ಭವಿಷ್ಯೋತ್ತರ ಪುರಾಣ** :- ಈ ಪುರಾಣದಲ್ಲಿ 15 ಅಧ್ಯಾಯಗಳಿಂದ ಪ್ರತಿಪಾದಿತವಾದ ಶ್ರೀ ವೆಂಕಟೇಶ ಮಾಹಾತ್ಮ್ಯವು ಹೆಚ್ಚು ಪ್ರಚಾರದಲ್ಲಿದ್ದು ಸರ್ವಜನಾದರಣೀಯ ವಾಗಿದೆ. ಇದರಲ್ಲಿ ಶ್ರೀನಿವಾಸನ ಲೋಕಕಲ್ಯಾಣಾತ್ಮಕವಾದ ಕಲ್ಯಾಣವೈಭವವು ಪ್ರಧಾನವಾಗಿ ವರ್ಣಿತವಾಗಿದೆ. ಜನಕ ಮಹಾರಾಜನ ದುಃಖ ಪರಿಹಾರಕ್ಕಾಗಿ ಕುಲಪುರೋಹಿತರಾದ ಶತಾನಂದರು ವೆಂಕಟಾಚಲ ಮಹಾತ್ಮೆಯನ್ನು ವರ್ಣಿಸುವರು. ಶತಾನಂದರು ಹೇಳುವಂತೆ ಸ್ವಾಮಿಯು ವೆಂಕಟಾಚಲಕ್ಕೆ ಬರುವುದು, ಹುತ್ತದಲ್ಲಿ ಅಡಗುವುದು, ಲಕ್ಷ್ಮಿಯು ಬ್ರಹ್ಮನನ್ನು ಗೋವನ್ನಾಗಿ ಮಾಡಿ ಚೋಳರಾಜನಿಗೆ ಮಾರುವುದು, ಹುತ್ತದಲ್ಲಿರುವ ಸ್ವಾಮಿಗೆ ಬ್ರಹ್ಮನು ನಿತ್ಯದಲ್ಲೂ ಹಾಲನ್ನುಣಿಸುವುದು, ಗೋಪಾಲನ ಕೋಪ, ಹಸುವನ್ನು ಹೊಡೆಯಲು ಬಂದ ಗೋಪಾಲನಿಂದ ಶ್ರೀನಿವಾಸನಿಗೆ ಆದ ಪೆಟ್ಟು ಗೋಪಾಲನ ಮೃತಿ, ಚೋಳರಾಜನಿಗೆ ಶಾಪ - ಇವೇ ಮೊದಲಾಗಿ ಶ್ರೀನಿವಾಸ ಪದ್ಮಾವತಿಯರ ವೈಭವೋಪೇತವಾದ ವಿವಾಹದ ವರೆಗೂ ಎಲ್ಲವನ್ನೂ ಸುಂದರವಾಗಿ ವಿವರಿಸಿರುವರು. ಕೊನೆಯಲ್ಲಿ ದಶರಥನ ಪರಲೋಕ ಯಾತ್ರೆ, ರಾಜ್ಯಕ್ಕಾಗಿ ತೊಂಡಮಾನ ಮತ್ತು ವಸುದಾನರ ಮಧ್ಯದಲ್ಲಿ ಕಲಹ, ಕೊನೆಗೆ ಶ್ರೀನಿವಾಸನ ಮಾತಿನಂತೆ ತೊಂಡಮಾನ ವಸುದಾನರು ಸಂಧಿಯನ್ನು ಮಾಡಿಕೊಳ್ಳೋಣ, ಶ್ರೀನಿವಾಸನ ಆದೇಶದಂತೆ ತೊಂಡಮಾನನು ಸ್ವಾಮಿಗಾಗಿ ದಿವ್ಯಮಂದಿರವನ್ನು ನಿರ್ಮಿಸಿ ಕೊಡೋಣ, ಬ್ರಹ್ಮನು ನಡೆಸಿದ ಶ್ರೀನಿವಾಸನ ಉತ್ಸವ, ಕೂರ್ಮ ದ್ವಿಜ ಮತ್ತು ಭೀಮನೆಂಬ ಕುಂಬಾರನ ವೃತ್ತಾಂತ ಇವುಗಳನ್ನು ವಿಶದಮಾಡಿರುವರು.

**ಪದ್ಮ ಪುರಾಣ** :- ಈ ಪುರಾಣದಲ್ಲಿ ಶ್ರೀ ವೆಂಕಟಾಚಲ ಮಹಾತ್ಮ್ಯವು 24 ರಿಂದ 34 ರವರೆಗೆ ಇರುವ 11 ಅಧ್ಯಾಯಗಳಲ್ಲಿ ವರ್ಣಿತವಾಗಿದೆ. ಇದರ ಪ್ರಾರಂಭದಲ್ಲಿ ಶುಕ್ರಾಚಾರ್ಯರ ಚರಿತ್ರೆಯು ವಿಶೇಷವಾಗಿ ಹೇಳಲ್ಪಟ್ಟಿದೆ. ಮೇರು ಶಿಖರದಿಂದ ವೆಂಕಟಾದ್ರಿಗೆ ಬಂದ ಅವರು ಅಲ್ಲಿನ ಎಲ್ಲಾ ತೀರ್ಥಗಳಲ್ಲಿ ಮಿಂದು ಶ್ರೀನಿವಾಸನ ಅನುಗ್ರಹಕ್ಕೆ ಪಾತ್ರರಾಗುವರು. ಆಕಾಶ ವಾಣಿಯ ಆದೇಶದಂತೆ ಅವರು ಪದ್ಮ ಸರೋವರಕ್ಕೆ ಬಂದು ತಪಸ್ಸನ್ನು ಮಾಡಿ ಸಿದ್ಧಿಯನ್ನು ಪಡೆಯುವರು. ಅಲ್ಲಿ ರಾಮಕೃಷ್ಣರ ದೇವಾಲಯವನ್ನು ನಿರ್ಮಿಸಿ ಪುನಃ ಶ್ರೀನಿವಾಸನ ಸನ್ನಿಧಿಯನ್ನೇ ಸೇರುವರು. ಕುಮಾರಧಾರೆಯಲ್ಲಿ ಸ್ನಾನಮಾಡಿದ ಕುಮಾರಸ್ವಾಮಿಗೆ ಆ ಸ್ನಾನದ ಫಲದಿಂದ ಶಕ್ತಿ ಎಂಬ ಆಯುಧವು ದೊರೆಯುವುದು. ಪಾಪವಿನಾಶಿನಿ ಸ್ನಾನದ ಫಲದಿಂದ ಇಂದ್ರನು ವೃತ್ರಾಸುರ ಸಂಹಾರದಿಂದ ತನಗೆ ಬಂದೊದಗಿದ ಪಾಪವನ್ನು ಕಳೆದು ಕೊಳ್ಳುವನು. ಇದಲ್ಲದೆ ಈ ಪುರಾಣದಲ್ಲಿ ಸ್ವಾಮಿ ಪುಷ್ಕರಣಿಯ ಮಹಿಮೆ, ಕಿರಾತ ದಂಪತಿಗಳಿಗೂ, ರಾಜನಿಗೂ ಒಲಿದ ವರಾಹಸ್ವಾಮಿಯು ಹುತ್ತದಿಂದ ಹೊರಬಂದು ಅವರಿಗೆ ದರ್ಶನ ಕೊಡುವುದು, ನೃಸಿಂಹಾದ್ರಿಯಲ್ಲಿ ಈಶ್ವರನು ಮಾಡಿದ ತಪಸ್ಸು, ಪಾಂಡುತೀರ್ಥ - ನಾರಾಯಣಾದ್ರಿಗಳ ಮಹಿಮೆ, ದೈತ್ಯರ ಸಂಹಾರಕ್ಕಾಗಿ ಕುಮುದಾಕ್ಷನೆಂಬ ತನ್ನ ದ್ವಾರಪಾಲಕನನ್ನು ಕಳುಹಿಸುವುದು, ಭೃಗುಋಷಿ ಒದ್ದನೆಂಬ ಕೋಪದಿಂದ ಕೊಲ್ಹಾಪುರವನ್ನು ಸೇರಿದ ಲಕ್ಷ್ಮೀದೇವಿಯನ್ನು ಹುಡುಕುತ್ತಾ ಶ್ರೀನಿವಾಸನು ಸುವರ್ಣಮುಖೀ ನದಿಯ ತೀರದಲ್ಲಿ ಪದ್ಮಸರೋವರವನ್ನು ನಿರ್ಮಿಸಿ, ಅಲ್ಲಿ ಲಕ್ಷ್ಮಿಯನ್ನು ಧ್ಯಾನಿಸುತ್ತಾ ನಿಲ್ಲುವುದು, ಪದ್ಮ ಸರೋವರದಲ್ಲಿ ಲಕ್ಷ್ಮಿಯ ಪ್ರಾದುರ್ಭಾವ, ಪದ್ಮಸರೋವರಕ್ಕೆ ಮಹಾಮಹಿಮೆಯನ್ನು ಕರುಣಿಸಿ ಶ್ರೀನಿವಾಸನು ಪುನಃ ಶೇಷಾಚಲಕ್ಕೆ



ಹೊರಡುವುದು, ನಾರದಾದಿ ಎಂಟು ಜನ ಋಷಿಗಳು ಹೇಳಿದ ಪದ್ಮಸರೋವರದ ಮಹಿಮೆ, ಪುನಃ ಶುಕ್ರಾಚಾರ್ಯರ ಸಂಕ್ಷಿಪ್ತ ಚರಿತ್ರೆ, ಛಾಯಾಶುಕನ ಜನನ ಇವು ವರ್ಣಿತವಾಗಿವೆ.

**ಗರುಡಪುರಾಣ :-** ವಶಿಷ್ಠನು ಅರುಂಧತಿಗಾಗಿ ಪರ್ವತದ ಮಹಿಮೆಯನ್ನು ಹೇಳುವನು. ಅವಳು ಪತಿಯ ಅಪ್ಪಣೆಯನ್ನು ಪಡೆದು ವೆಂಕಟಾದ್ರಿಗೆ ಬಂದು ತುಂಬುರು ತೀರ್ಥದ ಬಳಿಯಲ್ಲಿ ತಪಸ್ಸು ಮಾಡುವಳು. ಪ್ರೀತನಾದ ಪರಮಾತ್ಮನು ಪ್ರತ್ಯಕ್ಷವಾಗಿ ಅರುಂಧತಿಗೆ ತೀರ್ಥದ ಮಹಿಮೆಯನ್ನು ಹೇಳುವನು.

**ಹರಿವಂಶ :-** ಇಲ್ಲಿ ಧರ್ಮರಾಜನಿಗಾಗಿ ಭೀಷ್ಮನು ವೆಂಕಟಾಚಲ ಮಹಿಮೆಯನ್ನು ಹೇಳುವನು. ನಾರದಾದಿಗಳು ಶ್ರೀನಿವಾಸನ ಸೇವೆಗಾಗಿ ವೆಂಕಟಾಚಲಕ್ಕೆ ಬರುವನು. ಅಲ್ಲಿ ಅವರಿಗೆ ನಾನಾರೀತಿಯಿಂದ ಶ್ರೀನಿವಾಸನ ಸೇವೆಯಲ್ಲಾಸಕ್ತರಾದ ಮಹಿತಾತ್ಮರ ದರ್ಶನವಾಗುವುದು; ಶ್ರೀನಿವಾಸನ ಅನುಗ್ರಹವೂ ದೊರೆಯುವುದು. ಈ ವೃತ್ತಾಂತವನ್ನು ವಿವರಿಸಿದ ಭೀಷ್ಮನು ಧರ್ಮರಾಜನಿಗೆ ವೆಂಕಟಾಚಲಕ್ಕೆ ಯಾತ್ರೆ ಬೆಳೆಸುವಂತೆ ಆದೇಶಿಸುವನು.

**ಮಾರ್ಕಂಡೇಯ ಪುರಾಣ :-** ಈ ಪುರಾಣದಲ್ಲಿ ವೆಂಕಟಾಚಲ ಮಾಹಾತ್ಮೆಯು 4 ಅಧ್ಯಾಯಗಳಲ್ಲಿ ವರ್ಣಿತವಾಗಿದೆ. ತಂದೆಯ ಅಪ್ಪಣೆಯಂತೆ ತೀರ್ಥಯಾತ್ರೆಗಳನ್ನು ಮಾಡುತ್ತಲಿದ್ದ ಮಾರ್ಕಂಡೇಯನು ಮಾರ್ಗ ಮಧ್ಯದಲ್ಲಿ ಗರುಡನಿಂದ ವೆಂಕಟಾಚಲ ಮಹಾತ್ಮೆಯನ್ನು ಕೇಳಿ ತಿಳಿಯುವನು. ಮುಂದೆ ಮಾರ್ಕಂಡೇಯನು ಪಾಪದಿಂದ ನೊಂದ ಸುದ್ದನೆಂಬ ಅಗಸ್ತ್ಯಶಿಷ್ಯನೊಡನೆ ವೆಂಕಟಾಚಲಕ್ಕೆ ಬಂದು ಶ್ರೀನಿವಾಸನ ಅನುಗ್ರಹಕ್ಕೆ ಪಾತ್ರನಾಗುವನು. ಸುದ್ದನು ಸಹ ಸಕಲ ಪಾಪಗಳಿಂದ ಮುಕ್ತನಾಗಿ ತನ್ನ ವೃತ್ತಾಂತವನ್ನು ಮಾರ್ಕಂಡೇಯನಿಗೆ ಹೇಳುವನು. ಅಗಸ್ತ್ಯನು ಮಾರ್ಕಂಡೇಯನಿಗೆ ವೆಂಕಟಾಚಲದ ವೈಭವವನ್ನು ಪುನಃ ಹೇಳುತ್ತಾ, ಕುಮಾರಧಾರಾತೀರ್ಥದ ಮಹಿಮೆಯನ್ನು, ಆ ತೀರ್ಥದ ಸ್ನಾನದಿಂದ ಒಬ್ಬ ವೃದ್ಧ ಬ್ರಾಹ್ಮಣ ಮತ್ತು ಕುಮಾರಸ್ವಾಮಿಯರು ಹೊಂದಿದ ಸೌಭಾಗ್ಯವನ್ನೂ, ಕುಮಾರ ಸ್ವಾಮಿಯು ಶ್ರೀನಿವಾಸನನ್ನು ಕುರಿತು ಮಾಡಿದ ಸ್ತೋತ್ರವನ್ನೂ ವಿವರಿಸುವನು.

**ವಾಮನ ಪುರಾಣ :-** ಈ ಪುರಾಣದಲ್ಲಿ 20 ನೇ ಅಧ್ಯಾಯದಿಂದ ಪ್ರಾರಂಭವಾಗಿ 44 ನೇ ಅಧ್ಯಾಯದವರೆಗಿರುವ 25 ಅಧ್ಯಾಯಗಳಲ್ಲಿ ಶ್ರೀ ವೆಂಕಟಾಚಲ ಮಹಾತ್ಮೆಯು ವರ್ಣಿತವಾಗಿದೆ. ಇಲ್ಲಿ ಜನಕ, ಕುಮಾರಸ್ವಾಮಿ, ಈಶ್ವರ - ಮೊದಲಾದವರು ವೆಂಕಟಾಚಲದಲ್ಲಿ ಶ್ರೀನಿವಾಸನನ್ನು ಕುರಿತು ಮಾಡಿದೆ ಸೇವೆ, ಶಂಕರನು ಪಾರ್ವತಿಗೆ ಹೇಳಿದ ಶ್ರೀನಿವಾಸನ ಅವತಾರ ಕಾರಣ, ವಿಷ್ವಕ್ಸೇನನ ಜನನ, ಚಕ್ರವೇ ಮೊದಲಾದ 17 ತೀರ್ಥಗಳ ಮಹಾತ್ಮೆ, ಶ್ರೀನಿವಾಸನನ್ನು ಕುರಿತು ವಾಯುವೇ ಮೊದಲಾದವರು ಮಾಡಿದ ತಪಸ್ಸು, ಶತಾನಂದರು ಜನಕನಿಗೆ ಹೇಳಿದ ಭಗವದವತಾರದ ಕಥೆ, ಅಗಸ್ತ್ಯರು ಶೇಷಾಚಲದ ವಿವಿಧ ದಿಕ್ಕುಗಳಲ್ಲಿ ಸಂಚರಿಸುವುದು, ಅಲ್ಲಿರುವ ಶಂಕರಾದಿಗಳಿಂದ ಶ್ರೀನಿವಾಸನ ಮಹಿಮೆಯನ್ನು ಕೇಳಿ ತಿಳಿಯುವುದು, ಕಪಿಲಾದಿ ಅನೇಕ ತೀರ್ಥಗಳ ಮಹಿಮೆ, ಶಂಖನೆಂಬ ರಾಜನ ವೃತ್ತಾಂತ, ಅಗಸ್ತ್ಯಾದಿಗಳು ಸ್ವಾಮಿ ಪುಷ್ಕರಣಿಯ ತೀರದಲ್ಲಿ ಮಾಡಿದ ತಪಸ್ಸು, ಉಪರಿಚರ ವಸುವಿನ ವೃತ್ತಾಂತ, ದೇವಜಿತ್ತನೆಂಬ ರಾಕ್ಷಸನ ಸಂಹಾರ, ವಾಯುದೇವನಿಗೆ ಬ್ರಹ್ಮನು ಹೇಳಿದ ಸ್ವಾಮಿಪುಷ್ಕರಣಿಯ ಮಹಾತ್ಮೆ - ಇವು ವರ್ಣಿತವಾಗಿವೆ.

ಇಂದು ಕರ್ನಾಟಕದಲ್ಲಿ ಎಲ್ಲಾ ಪುರಾಣಗಳಲ್ಲಿರುವ ಶ್ರೀನಿವಾಸನ ಕಥೆಯು ಪ್ರಚಾರದಲ್ಲಿಲ್ಲ. ಕೇವಲ ಭವಿಷ್ಯೋತ್ತರ ಪುರಾಣದ ಪ್ರವಚನವೇ ನಡೆಯುವುದು. ಇದಕ್ಕೆ ಕಾರಣ - ಕಥಾ ವಸ್ತುವಿನಲ್ಲಿರುವ ಸೌಂದರ್ಯ, ಆಕರ್ಷಕವಾದ ಸನ್ನಿವೇಶಗಳು, ಜನಜೀವನಕ್ಕೆ ಸಮೀಪದಲ್ಲಿರುವ ಪಾತ್ರಗಳು, ಸಂಭಾಷಣೆಯಲ್ಲಡಕವಾದ ಹಾಸ್ಯ, ಭಕ್ತಿ ಭಾವದ ಬೆಳವಣಿಗೆಗೆ ಬೇಕಾದ ಭಗವಂತನ ಹಾಗೂ ಭಕ್ತರ ಸುಂದರವರ್ಣನೆ, ಆಕರ್ಷಕವಾದ ಶ್ರೀನಿವಾಸಕಲ್ಯಾಣವೈಭವದ ಘಟ್ಟ. ಇನ್ನು ಸ್ತೋತ್ರಪಾಠದ ವಿಷಯದಲ್ಲಿ, ಆದಿತ್ಯ ಪುರಾಣಾಂತರ್ಗತ ಶ್ರೀನಿವಾಸನ ಸ್ತೋತ್ರವೇ ಹೆಚ್ಚು ಬಳಕೆಯಲ್ಲಿದೆ.

ಭವಿಷ್ಯೋತ್ತರ ಪುರಾಣಗತ ವೆಂಕಟೇಶ ಮಹಾತ್ಮೆಯು ಎಷ್ಟು ಸುಂದರವೋ ಅಷ್ಟೇ ಭಗವನ್ಮಹಿಮಾಪ್ರತಿಪಾದಕವೂ ಆಧ್ಯಾತ್ಮ ತತ್ತ್ವ ಬೋಧಕವೂ ಆಗಿದೆ. ಇಲ್ಲಿ ಶ್ರೀಹರಿಯು - ಭಕ್ತಾಪರಾಧ ಸಹಿಷ್ಣು, ಭಕ್ತರಿಗಾಗಿ ವೈಕುಂಠವನ್ನು ಬಿಡುವ ಕಡುಕರುಣಾಮಯ, ಭಕ್ತರಕ್ಷಕ - ಇವೇ ಮುಂತಾದ ಅನೇಕ ವಿಶಿಷ್ಟಗುಣಗಳು ಕಥಾರೂಪದಲ್ಲಿ ವರ್ಣಿತವಾಗಿವೆ.

ಪುರಾಣದ ಪ್ರಾರಂಭದಲ್ಲಿ ಬರುವ ಪರ್ವತದ ನಾಲ್ಕು ಹೆಸರುಗಳನ್ನು ಬಣ್ಣಿಸುವ ಘಟ್ಟವು ಧರ್ಮಾರ್ಥಕಾಮಮೋಕ್ಷಗಳ ಸ್ವರೂಪಸಾಧನೆಗಳನ್ನು ವಿವರಿಸುತ್ತಿರುವುದು. ನಿರಂತರ ಭಗವಂತನಲ್ಲಿ ಮನವಿರಿಸಿದ ಜೀವಿಗೆ ಪ್ರತಿರೂಪಳು ಪದ್ಮಾವತಿ; ಪರಮಾತ್ಮನ ಪರಮಾನುಗ್ರಹವೇ ಮಂಗಳಸೂತ್ರ; ಜೀವ ಬ್ರಹ್ಮರ ನಿಜಸಂಬಂಧ ಜ್ಞಾನವೇ ಕಲ್ಯಾಣ, ಆಕಾಶರಾಜ - ಧರಣೀದೇವಿ - ಪದ್ಮಾವತಿಯರು ಕ್ರಮವಾಗಿ ಆಕಾಶ - ಭೂಮಿ, ವೇದಗಳಿಗೆ ಪ್ರತಿನಿಧಿಗಳು. ಅನಂತಾಕಾಶದಲ್ಲಿ ವ್ಯಾಪ್ತಗಳಾಗಿ ಭೂಮಿಗೆ ಬಂದ ಅಪೌರುಷೇಯ ವೇದಗಳು ಭಗವಂತನ ಗುಣಗಾನಕ್ಕೇನೇ ಮೀಸಲಾಗಿ ಅವನ ಪಾದಪದ್ಮಗಳನ್ನು ಸೇರುವಂತೆ, ಅಯೋನಿಜಳಾದರೂ ಆಕಾಶರಾಜ ಧರಣೀ ದೇವಿಯರಿಗೆ ಮಗಳೆನಿಸಿದ ಪದ್ಮಾವತಿಯು ಶ್ರೀನಿವಾಸನನ್ನೇ ಸೇರಿದಳು. ಗಮ್ಯವನ್ನು ಸೇರಲು ಸೃಷ್ಟಿಗೆ ಸಂದು ಭಗವದನುಗ್ರಹಕ್ಕೆ ಪಾತ್ರನಾದ ಜೀವಿಯ ಜೀವನದಲ್ಲಿ ಹಂತಹಂತವಾಗಿ ನಡೆಯುವ ಸಾಧನೆಗಳು, ಆ ಸಂದರ್ಭದಲ್ಲಿ ಜೀವಿಯೊಡನೆ ಭಗವಂತನಿಗಿರುವ ಸಂಬಂಧ, ಅದರ ಉತ್ತರೋತ್ತರಾಭಿವೃದ್ಧಿ ಪರ್ಯವಸಾನದಲ್ಲಿ ಜೀವಿಗೆ ದೊರೆಯುವ ಫಲ - ಇವುಗಳೇ ಶ್ರೀನಿವಾಸ ಕಲ್ಯಾಣದ ಮುಖ್ಯ ತಾತ್ಪರ್ಯಗಳಾಗಿವೆ. ರಸವತ್ತರಗಳಾದ ವೇದಾಂತ ರಹಸ್ಯಗಳು ಈ ಶ್ರೀನಿವಾಸಕಲ್ಯಾಣದ ಉದ್ದಕ್ಕೂ ಹಾಸುಹೊಕ್ಕಾಗಿವೆ.

★★★★★

# ಅನ್ನಮಯ್ಯ - ವೆಂಕಟೇಶ

- ಡಾ|| ಕೆ. ಸರ್ವೋತ್ತಮರಾವು.

ಅನ್ನಮಾಚಾರ್ಯರು ಕ್ರಿ.ಶ. 1408 ರಲ್ಲಿ ಹುಟ್ಟಿ ಕ್ರಿ.ಶ. 1503 ರ ತನಕ ಬಾಳಿದವರು. ಆಂಧ್ರಪ್ರದೇಶದ ಕಡಪ ಜಿಲ್ಲೆಯ ರಾಜಂಪೇಟೆ ತಾಲ್ಲೂಕಿನಲ್ಲಿ ತಾಳ್ಳಪಾಕ ಗ್ರಾಮದಲ್ಲಿ ಹುಟ್ಟಿದವರು. ತಾಯಿ ಲಕ್ಕಮಾಂಬ, ತಂದೆ ನಾರಾಯಣಸೂರಿ. ಇವರು ವಿಷ್ಣುವಿನ ನಂದಕಾಂಶದಿಂದ ಹುಟ್ಟಿದವರೆಂದು ಹೇಳುತ್ತಾರೆ. ದಿನಕ್ಕೊಂದು ಕೀರ್ತನೆಯಂತೆ 32000 ಕೀರ್ತನೆಗಳನ್ನು ಹಾಡಿದರು. ಇವೆಲ್ಲವೂ ತಾಮ್ರಪತ್ರಗಳಲ್ಲಿ ಕಾಣುತ್ತವೆ. ತೆಲುಗಿನ ಪದಸಾಹಿತ್ಯಕ್ಕೆ ಅನ್ನಮಯ್ಯನ ಕೊಡುಗೆ ಅಪೂರ್ವವಾದುದು ಮತ್ತು ಅದ್ವಿತೀಯ ವಾದುದು.

ಅನ್ನಮಾಚಾಯರ ಆರಾಧ್ಯ ದೈವ ಶ್ರೀ ವೆಂಕಟೇಶ್ವರಸ್ವಾಮಿ. ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯ ದಿವ್ಯಮಂಗಳ ಮೂರ್ತಿಯನ್ನುನೋಡಿ 'ಇಪ್ಪುಡಿಟು ಕಲಗಂಟಿ' ಎಂಬ ಕೀರ್ತನೆಯನ್ನು ಹಾಡಿದರು. ಅವರಿಗೆ ಸ್ವಾಮಿ ಸಂಪೂರ್ಣ ಅನುಗ್ರಹ ಲಭ್ಯವಾಯಿತು. ಸಾಳುವ ನರಸಿಂಹರಾಯನು ತನ್ನ ಬಗೆಗೆ ಕೀರ್ತನೆಯನ್ನು ಬರೆಯ ಬೇಕೆಂದು ಅಹಂಕಾರದಿಂದ ಕೇಳುವಾಗ ಅನ್ನಮಾಚಾರ್ಯರು 'ನರಹರಿ ಕೀರ್ತನ ನಾ ನಿನ ಜಿಹ್ವ ಪರುಲ ನುತಿಂಪಗ ನೋಪದು ಜಿಹ್ವ' ಎಂದು ತಿರಸ್ಕರಿಸಿದರಂತೆ. ಅರಸನು ಕೋಪದಿಂದ ಕಾರಾಗೃಹದಲ್ಲಿ ಬಂಧಿಸಿದನು. ತನ್ನ ಭಕ್ತಿಯ ಶಕ್ತಿಯಿಂದ ಅಲ್ಲಿಂದ ಬಿಡುಗಡೆ ಹೊಂದಿದರು. ಆಚಾರ್ಯರು ತಾವು ಅರ್ಚಿಸುವ ದೇವತಾ ವಿಗ್ರಹಗಳು ಚೋರಿಯಾದ ವೇಳೆ ವಿಕಲಮನಸ್ಕರಾದರು. ಭಕ್ತಿಯಿಂದ ಹಾಡಿದಾಗ ಆ ವಿಗ್ರಹಗಳು ಪುನಃ ಲಭ್ಯವಾದವು. ಅನ್ನಮಯ್ಯನ ಜೀವನದಲ್ಲಿ ವೆಂಕಟೇಶ್ವರಸ್ವಾಮಿ ಅನುಗ್ರಹ ಅತೀತವೆಂದು ಹೇಳಬಹುದು.

ಅನ್ನಮಾಚಾರ್ಯರು ವೆಂಕಟೇಶ್ವರನ ಪರಬ್ರಹ್ಮ ತತ್ತ್ವವಾಗಿ ದರ್ಶಿಸಿದರು. 'ಬ್ರಹ್ಮಮೊಕ್ಕಟೇ ಪರಬ್ರಹ್ಮ ಮೊಕ್ಕಟೇ' ಕೃತಿ ಇದಕ್ಕೊಂದು ಸಾಕ್ಷ್ಯ. ಹೀನಾಧಿಕಗಳು ಸೃಷ್ಟಿಯಲ್ಲಿ ಇಲ್ಲ. 84 ಲಕ್ಷ ಜಂತುಗಳು ಎಲ್ಲವೂ ಸಮಾನವೇ. ಆನೆ ಮೇಲೆ, ನಾಯಮೇಲೆ ಬೀಳುವ ಬಿಸಿಲು ಒಂದೇ, ಭೇದವಿಲ್ಲ. ಎಲ್ಲರನ್ನೂ ಕಾಯುವ ನಾಮ ವೆಂಕಟೇಶ್ವರನಾಮವು ಒಂದೇ.

ದೇವರೆಂದರೆ ತಿಮ್ಮಪ್ಪ ಗುರುವೆಂದರೆ ಮಂಚಾಲಿಯ ರಾಘಪ್ಪ - ಇದು ಕರ್ನಾಟಕ ಪ್ರಾಂತದಲ್ಲಿ ಪ್ರಚುರವಾದ ಒಂದು ಹೇಳಿಕೆ. ವೆಂಕಟೇಶ್ವರನನ್ನು ಕೆಲವರು ವಿಷ್ಣುವೆಂದೂ, ಕೆಲವರು ಶಿವನೆಂದೂ, ಕೆಲವರು ಕುಮಾರಸ್ವಾಮಿ ಎಂದೂ, ಕೆಲವರು ಶಕ್ತಿಸ್ವರೂಪನೆಂದೂ ಮತ್ತು ಕೆಲವರು ಭೈರವನೆಂದೂ, ಜನಾಕಾರಮೂರ್ತಿ ಯೆಂದೂ ವಾದ ಮಾಡುತ್ತಾ, ಆಧಾರಗಳನ್ನು ತೋರುತ್ತಿದ್ದಾರೆ. ಆದ್ದರಿಂದ ಸಮನ್ವಯ ಸಿದ್ಧಾಂತವನ್ನು ಅನ್ನಮಾಚಾರ್ಯರು ಮಾಡಿದ್ದಾರೆ. 'ಎಂತ ಮಾತ್ರಮುನ ಎವ್ವರು ತಲಚಿನ ಅಂತಮಾತ್ರಮೇ ನೀವು' ಕೃತಿಯಲ್ಲಿ ಈ ವಿಭೇದಗಳನ್ನು ಸ್ಮರಿಸಿ 'ಭಾವನೆ ಒಂದೇ ಇದಕ್ಕೆ' ಸಮಾಧಾನವೆಂದು ಹಾಡಿದ್ದಾರೆ. ಇದೇ ಶ್ರೀನಿವಾಸನ ತತ್ತ್ವ.

ಬಹು ದೇವತಾರಾಧನೆ ಹಿಂದೂ ಧರ್ಮದ ವಿಲಕ್ಷಣ ತತ್ತ್ವವೆಂದು ಹೇಳಬಹುದು.





ಅನ್ನಮಾಚಾರ್ಯರು ತಿಮ್ಮಪ್ಪನ ಭಜಿಸಿದರೂ ವಿಠಲನನ್ನು ಸ್ಮರಿಸಿದ್ದಾರೆ.

ತಾನೇ ಶ್ರೀ ವೇಂಕಟಾದ್ರಿ
ಪಾಂಡುರಂಗಮುನ
ಯೆಟ್ಟುಗೋಲ್ಪಿನಾ ವರಮುಲಿಚ್ಚೆ ವಿಠಲುಡು

ನೋಡಲು ಬಾಲಮೂರ್ತಿಯಾದರೂ ಎಲ್ಲ ವಿದ್ಯೆಗಳನ್ನು ಕಲಿತವನು ವಿಠಲನು - ಎಂದು ಹೊಗಳಿದ್ದಾರೆ. ಇದೇ ಪ್ರಕಾರ ಚೆನ್ನಕೇಶವನ ನೋಡಿದರೂ, ನರಸಿಂಹನನ್ನು ದರ್ಶಿಸಿದರೂ ಅವರ ದೃಷ್ಟಿಯಲ್ಲಿ ತಿಮ್ಮಪ್ಪನೇ ಕಾಣುತ್ತಾನೆ.

ತಿರುಮಲೆಯಲ್ಲಿರುವ ವೆಂಕಟೇಶ್ವರನನ್ನು ಕಾಂಚನಬ್ರಹ್ಮನಾಗಿ ಸ್ತುತಿಸುವುದು ಭಕ್ತರ ಪಂಥ. ಸ್ವಾಮಿ ಅರ್ಚಾವತಾರಮೂರ್ತಿ. ಅವನೇ ರಾಮನು. ಅವನೇ ಕೃಷ್ಣನು. ಅವನೇ ನಾರಸಿಂಹನು. ಅವನೇ ದಶಾವತಾರಮೂರ್ತಿ ಸ್ವರೂಪ. ಆಳ್ವಾರ್‌ಗಳು ಇದೇ ರೀತಿಯಲ್ಲಿ ಹಾಡಿದ್ದಾರೆ. ದಿವ್ಯಪ್ರಬಂಧಗಳನ್ನು ಕಲಿತ ಅನ್ನಮಾಚಾರ್ಯರು ಅದೇ ಬಗೆಯಲ್ಲಿ ವೆಂಕಟರಾಮುಡು, ವೆಂಕಟಕೃಷ್ಣುಡು ವೆಂಕಟನರಸಿಂಹುಡು ಎಂದು ಎರಡು ಹೆಸರುಗಳನ್ನು ಜೋಡಿಸಿ ಹಾಡಿದ್ದಾರೆ. ಈ ಸ್ತುತಿಯಲ್ಲಿ ಗರ್ಭಗುಡಿಯಲ್ಲಿದ್ದ ರಾಮಾದಿ ಮೂರ್ತಿಗಳ ಸ್ಮರಣವೂ ಆಗಬಹುದು. ಆದ್ದರಿಂದ ತಿರುಮಲೆಯಲ್ಲಿ ರಾಮನವಮಿ ಉತ್ಸವಗಳು, ಕೃಷ್ಣಜಯಂತಿ, ನಾರಸಿಂಹ ಜಯಂತಿಗಳು ನಡೆಸುತ್ತಾರೆ.

ಅನ್ನಮಾಚಾರ್ಯರು ನವವಿಧ ಭಕ್ತಿಭೇದಗಳನ್ನು ತಮ್ಮ ಕೀರ್ತನೆಗಳಲ್ಲಿ ಪ್ರಕಟಿಸಿದ್ದಾರೆ. 'ವಿನರೋ ಭಾಗ್ಯಮು ವಿಷ್ಣುಕಥ' ಕೃತಿಯಲ್ಲಿ ಶ್ರವಣ ಭಕ್ತಿ, 'ಶ್ರೀವಿಷ್ಣುನಾಮ ಮೊಕಟೇ ಚೇತಿ ಕಬ್ಬೆ ವೈಕುಂಠಮು' ಎಂಬ ವ್ಯಾಕ್ಯಗಳಲ್ಲಿ ನಾಮಸ್ಮರಣೆ. 'ಈ ಪಾದಮೇ ಕದಾ ಯಿಲಯೆಲ್ಲ ಕೊಲಿಚಿನದಿ' ಎಂಬ ಪಲ್ಲವಿಯಲ್ಲಿ ಪಾದಸೇವನೆ ವ್ಯಕ್ತವಾಗುತ್ತದೆ. ಅನ್ನಮಯ್ಯನ 'ಬ್ರಹ್ಮಕಡಿಗಿನ ಪಾದಮು' ಹಾಡು ಬಹಳ ಪ್ರಚಾರವಾದ ಕೀರ್ತನೆ ಎಂದು ಹೇಳಬಹುದು. 'ನಾನಾ ಭಕ್ತುಲಿವಿ ನರುಲ ಮಾರ್ಗಮುಲು' ಕೀರ್ತನೆಯಲ್ಲಿ ಉನ್ಮಾದಭಕ್ತಿ, ಪತಿವ್ರತಾಭಕ್ತಿ, ವಿಜ್ಞಾನಭಕ್ತಿ, ಆನಂದಭಕ್ತಿ, ರಾಕ್ಷಸಭಕ್ತಿ, ತುರೀಯಭಕ್ತಿ, ತಾಮಸಭಕ್ತಿ, ನಿಜಭಕ್ತಿ ಭೇದಗಳನ್ನುಹೇಳಿದ್ದಾರೆ. ಲಕ್ಷ್ಯವಾಗಿ ಹಲವಾರು ಕೀರ್ತನೆಗಳನ್ನು ಹಾಡಿದ್ದಾರೆ.

ಅನ್ನಮಾಚಾರ್ಯರಿಗೆ ಇಷ್ಟವಾದ ಭಕ್ತಿ ಕೈಂಕರ್ಯ ಭಕ್ತಿ. ತಮ್ಮ ಇಡೀ ಕುಟುಂಬವನ್ನು ಕೈಂಕರ್ಯಕ್ಕಾಗಿ ಅರ್ಪಿಸಿದ ಮಹನೀಯರು . ಅರಸರು ದಾನ ರೂಪದಲ್ಲಿ ಕೊಟ್ಟ ಗ್ರಾಮಗಳನ್ನು ಶ್ರೀನಿವಾಸನಿಗೆ ಅರ್ಪಿಸಿದ ಭಕ್ತರು ತಾಳ್ಳಪಾಕ ಕುಟುಂಬೀಕರು. ದೇವಾಲಯದಲ್ಲಿ ನಡೆಯುವ ಪ್ರತಿಯೊಂದು ಉತ್ಸವದಲ್ಲಿಯೂ ಭಾಗಪಡೆದುಕೊಂಡು ಸೇವೆ ಮಾಡಿದವರು. ಅದಕ್ಕೆ ಅನುಗುಣವಾಗಿ ಉತ್ಸವಕೀರ್ತನೆಗಳನ್ನು ಹಾಡಿದವರು ಅನ್ನಮಾಚಾರ್ಯರು. ಪೆರಿಯಾಳ್ವಾರ್ ಹಾಡಿದ ಬಗೆಯಲ್ಲಿ ವಾತ್ಸಲ್ಯ ಭಕ್ತಿಯನ್ನು ಆಚಾರ್ಯರು ಪ್ರಕಟಿಸಿದ್ದಾರೆ. ಕುಲಶೇಖರಾಳ್ವಾರ್ ಹೇಳಿದ ಪ್ರಕಾರ ತಾನು ದಾಸನಿಗೆ ದಾಸನಿಗೆ ದಾಸನಿಗೆ ದಾಸಾನು ದಾಸನಾಗಿ ಬಾಳುವೆನೆಂದು ಸ್ಪಷ್ಟವಾಗಿ ಹೇಳಿದ್ದಾರೆ.

ಅನ್ನಮಾಚಾರ್ಯನಿಗೂ ತಿಮ್ಮಪ್ಪನಿಗೂ ಇದ್ದ ಅನುಬಂಧ ಮಾಧುರ್ಯ ಭಕ್ತಿ ರೂಪವಾದದ್ದು. ಮಧುರ ಭಕ್ತಿಮಾರ್ಗದಲ್ಲಿ ಪರಮಾತ್ಮನೊಬ್ಬನೇ ಪುರುಷೋತ್ತಮನು. ಜೀವರಾಶಿಗಳು ಸ್ತ್ರೀರೂಪವೇ. ಗೋಪಿಯರು ಮಧುರ ಭಕ್ತಿ ಪೂರ್ವಕವಾಗಿ ಸೇವಿಸಿದರು. ನಮ್ಮಾಳ್ವಾರ್ ಪಾಶುರಗಳಲ್ಲಿ ಮಾಧುರ್ಯ ಭಕ್ತಿ ಪರಾಕಾಷ್ಠರೂಪದಲ್ಲಿ ಸ್ಪಷ್ಟವಾಗುತ್ತದೆ. ಅನ್ನಮಾಚಾರ್ಯರ ಕೀರ್ತನೆಗಳಲ್ಲಿ ಶೃಂಗಾರಕೀರ್ತನೆಗಳೇ ಹೆಚ್ಚು.

ಸಂಸಾರಮೇ ಮೇಲು ಸಕಲ ಜನುಲಕುನು
ಕಂಸಾಂತಕುನಿ ಭಕ್ತಿ ಕಲಿಗಿತೇ ಮೇಲು

- ಈ ಅಭಿಪ್ರಾಯವನ್ನೇ ಪುರಂದರ ದಾಸರು-

ಸಂಸಾರವೆಂಬಂಥ ಭಾಗ್ಯವಿರಲಿ

- ಎಂದು ಹೇಳಿದ್ದಾರೆ.

ಅನ್ನಮಾಚಾರ್ಯರದು ಮುಖ್ಯವಾಗಿ ಆತ್ಮಾನುಭವ ಕಾವ್ಯ. ಅವರ ಕೀರ್ತನೆಗಳು ವೆಂಕಟೇಶ್ವರನನ್ನು ಉದ್ದೇಶಿಸಿದವೇ ಆದರೂ ಅವರು ಅಭಿವ್ಯಕ್ತಿಸಿದ್ದು ತಮ್ಮ ಅಂತರಂಗ ಬಹಿರಂಗ ಅನುಭವಗಳನ್ನೆ. ದೋಷ ರಹಿತವಾದ, ಪ್ರಾಮಾಣಿಕವಾದ ಮತ್ತು ತೀವ್ರವಾದ ಭಗವದ್ಭಕ್ತಿ ಅವರ ರಚನೆಗಳಲ್ಲಿ ಕಂಡುಬರುತ್ತದೆ. ಅವರ ಕೀರ್ತನೆಗಳಲ್ಲಿರುವಷ್ಟು ಭಾವವೈವಿಧ್ಯ ಭಾವನಾಶಕ್ತಿ, ಅಳವಾದ ಅನುಭವಗಳ ಅಭಿವ್ಯಕ್ತಿ ತೆಲುಗಿನ ಬೇರೆ ಯಾವ ಕೀರ್ತನೆಕಾರರಲ್ಲೂ ಕಂಡುಬರುವುದಿಲ್ಲ.

ಅನ್ನಮಾಚಾರ್ಯರ ಕೀರ್ತನೆಗಳ ಬಗ್ಗೆ ರಾಳ್ಳಪಲ್ಲಿ ಅನಂತಕೃಷ್ಣ ಶರ್ಮ ಡಿ. ವಿ. ಗುಂಡಪ್ಪ ಮೊದಲಾದ ಹಿರಿಯರೂ ಹಾಡಿಹೊಗಳಿದ್ದಾರೆ.

★★★★★

# ದೇಶಿಕರು ಮತ್ತು ದಯಾನಿಧಿ

--- ಸಿ. ಗೋವಿಂದಾಚಾರ್.

ಭಗವಂತನ ತೇಜೋಮಯವಾದ ಮುಖ ಮಂಡಲವು 'ಸತ್ವಾವಜ್ರಿನ ಸಹಸ್ರಸೂರ್ಯ ಅನು' ಎಂದು ಶ್ರುತಿಯಲ್ಲಿ (ಋ viii 81-51), 'ದಿವಿಸೂರ್ಯ ಸಹಸ್ರಸ್ಯ' ಎಂದು ಗೀತೆಯಲ್ಲಿ, 'ಪುಂಸಾಂ ಮೋಹನರೂಪಾಯ' ಎಂದು ಮಹರ್ಷಿಗಳಿಂದ ಕೊಂಡಾಡಲ್ಪಟ್ಟಿದೆ. ಯತಿರಾಜರು ಶ್ರೀರಂಗನಾಥನನ್ನು ನೋಡಿದೊಡನೆಯೇ 'ಅಪರಿಮಿತ ದಿವ್ಯಭೂಷಣ' ಎಂದು ಮನಸ್ಸಿನಲ್ಲೇ ಅಂದುಕೊಂಡರು. ಅವರಿಗರಿವಾಗದಂತೆ ಜ್ಞಾನಬಲೈಶ್ವರ್ಯ ವೀರ್ಯ ಶಕ್ತಿತೇಜಃ ಸೌಶೀಲ್ಯ..... ಎಂದು 18 ಭೂಮಗುಣಗಳು ಅವರ ಸಿರಿಬಾಯಿಯಿಂದ ಧಾರಾಳವಾಗಿ ಪ್ರವಹಿಸಿತು. ವೇದಾಂತ ದೇಶಿಕರು ತಿರುಪತಿಯನ್ನು ಸೇವಿಸಲು ಬಂದಾಗ ಮಂದಹಾಸದ ನಗೆಯಿಂದ ಕೂಡಿದ ಆ ಅದ್ಭುತ ಮುಖಮಂಡಲವನ್ನು ನೋಡಿದಾಗ 'ದಯಾನಿಧಿಯೇ' ಎಂದು ಮನಸಿನಲ್ಲೇ ಸ್ಮರಿಸುತ್ತಾ ನಿಂತರು. ಆ ಮುಖಮಂಡಲದಲ್ಲಿ ಅವರು ದಯಾಗುಣವನ್ನು ಕಂಡು ನಾನಾ ರೀತಿಯ ಸದ್ಭಾವನೆಗಳನ್ನು ಕೂಡಿಕೊಂಡು ಶ್ರೀನಿವಾಸನ ದಯೆ ಎದುರಿಗೆ ಬಂದು ನಿಂತಿದೆಯೋ ಎಂದು ಭಾವಿಸಿಕೊಂಡು ಮನಸ್ಸಿನ ಆವೇಗದಲ್ಲಿ ಸ್ತೋತ್ರರಚನೆ ಮಾಡಲು ಸಂಕಲ್ಪಿಸಿದರು. ಹೀಗೆ ಮಾಡಲು ವೆಂಕಟನ ಪ್ರೇರಣೆಯೇ ಕಾರಣವೆಂದೂ ತಾವು ನಿಮಿತ್ತ ಮಾತ್ರವೆಂದು ಫಲಶ್ರುತಿಯಲ್ಲಿ ಹೇಳಿರುತ್ತಾರೆ. ಶ್ರೀನಿವಾಸನ ಸನ್ನಿಧಿಯಲ್ಲಿ ಯಾರು ಯಾವ ಪ್ರಾರ್ಥನೆ/ಸ್ತುತಿ ಮಾಡಿದರೂ ಅವೆಲ್ಲ ನೆರವೇರಿ ಯಶಸ್ವಿಯಾಗುವುದು ಎಂಬ ಐತಿಹ್ಯ ಅನಾದಿಕಾಲದಿಂದಲೂ ಬಂದಿದೆ. ಅವನ ದಯೆಯಿಂದ ಪ್ರೇರಿತರಾಗಿ ತಮ್ಮ ಮನಸ್ಸಿನಲ್ಲಿ ಆವಿರ್ಭವಿಸಿದ ಎಲ್ಲ ಭಾವನೆಗಳನ್ನು 'ದಯಾಶತಕ' ಎಂಬ 108 ಪದ್ಯಗಳಲ್ಲಿ ಹೊರಗೆಡವಿದ್ದಾರೆ. ದೇವರಿಗಿಂತ ದೇವರ ದಯೆಯೇ ಹಿರಿಮೆ ಉಳ್ಳದ್ದು ಎಂಬ ಘನ ಉದ್ದೇಶದೊಂದಿಗೆ ಈ ಭಾವಗೀತೆಯನ್ನು ರಚಿಸಿ ಶ್ರೀನಿವಾಸನ ದಯಾಗುಣವನ್ನು ನಾನಾ ರೀತಿಯಾಗಿ ವರ್ಣಿಸಿರುತ್ತಾರೆ. ಶ್ರೀನಿವಾಸನನ್ನು ಹೆಚ್ಚಾಗಿ ವೃಷಗಿರೀಶ. ವೃಷಶೈಲನಾಥ, ವೃಷಾಚಲಪತೆ, ವೃಷಪೃಥ್ವೀಧರಪತಿ ಎಂದೂ, ಕೆಲವೆಡೆ ಅಂಜನಾದ್ರೀಶ್ವರ ಎಂದು ಸಂಬೋಧಿಸಿರುತ್ತಾರೆ. ಅವನಲ್ಲಿರುವ ದಯೆಯನ್ನು ಕುರಿತು ಪದ್ಮಸಹಾಯಕರುಣೆ, ಶ್ರೀಧರ ಕರುಣೆ, ವೃಷಗಿರೀಶದಯೆ ಎಂದು ಸ್ತುತಿಸಿ ದಯಾದೇವಿ - ಶ್ರೀನಿವಾಸರು ದಿವ್ಯದಂಪತಿಗಳೆಂದು ಭಾವಿಸಿ ಇವರಲ್ಲಿರುವ ಮೈತ್ರಿಯನ್ನು 'ತಾರಾಮೈತ್ರಿ (ಎಂದೆಂದಿಗೂ ಅಗಲಲಾರದ ಮೈತ್ರಿ) ಎಂದು ಹೇಳಿರುತ್ತಾರೆ.



(ದ.ಶ. 20) ಅಂದರೆ ಶ್ರೀನಿವಾಸನ ದಯಾಗುಣವನ್ನು ಅವನ ದಿವ್ಯಮಹಿಷಿಯನ್ನಾಗಿ ಭಾವಿಸಿ ದೀರ್ಘವಾಗಿ ಸ್ತುತಿಸಿರುವುದು ಈ ಕೃತಿಯ ವಿಶೇಷ. ಅರ್ಥ ಸಂಪತ್ತಿನಿಂದ ಕೂಡಿದ ಈ ಕೃತಿ 10 ದಶಕಗಳಲ್ಲಿದೆ. ಕೊನೆಯ 8 ಪದ್ಯಗಳಲ್ಲಿ ಫಲಶ್ರುತಿ ಇದೆ.

ದಯೆಯ ಸ್ವರೂಪ : ಶ್ರೀನಿವಾಸನ ದಯೆಯನ್ನು ದೇಶಿಕರು ದಯಾದೇವಿ ಎಂದು ರೂಪಣಮಾಡಿ ಮಿಕ್ಕ ಭಾರ್ಯೆಯರಂತೆ, ಇವಳೂ ಕೂಡ ಅವನೊಡನೆ ನಿತ್ಯಯೋಗವನ್ನು ಹೊಂದಿರುವಳು, ಇವಳಿಲ್ಲದೆ ಭಗವತ್ಸ್ವರೂಪವಿರುವುದಿಲ್ಲ ಎಂದು ಹೇಳಿದ್ದಾರೆ. ಇತರ ಗುಣಗಳಿಗೆ ತಾಯಿ ಬೇರಿನಂತೆ ಇದು ಎಲ್ಲಕ್ಕೂ ಮೂಲವಾಗಿದೆ. ಷಡ್ಗುಣಗಳು ಕಿಂಕರರಾಗಿ ಅನುಚರರಾಗಿ ಹಿಂಬಾಲಿಸಿ ದಯೆಯ ಪ್ರಭಾವಕ್ಕೆ ಒಳಗಾಗುವುವು. ಬೇರೆ ಗುಣಗಳು ರಕ್ಷಣೆ ಹಾಗೂ ಶಿಕ್ಷೆಗೂ ಒದಗುತ್ತವೆ. ಆದರೆ ದಯಾಗುಣ ಎಂದಿಗೂ ಶಿಕ್ಷೆಯನ್ನೊದಗಿಸುವುದಿಲ್ಲ. ತಾಯಿ ಮಗುವಿನಲ್ಲಿ ಹೇಗೋ ಹಾಗೆಯೇ ನಮ್ಮಲ್ಲಿ ವಾತ್ಸಲ್ಯ ತೋರುವ ಮಾತೆಯಾಗಿದ್ದಾಳೆ. ಶ್ರೀನಿವಾಸನದಯೆ ಎಂದರೆ ಅವನಲ್ಲಿರುವ ಮಾತೃಭಾವನೆ. ಇದರಲ್ಲೇ ದೇಶಿಕರು ಗಾಢವಾದ ಆಸಕ್ತಿವಹಿಸಿರುತ್ತಾರೆ. ದಯೆಯೆಂಬ ಭಗವಂತನ ಕಲ್ಯಾಣ ಗುಣವೇ ಪ್ರಧಾನವಾದುದು, ಇದೇ ತಮಗೆ ಸರ್ವಸ್ವವೂ ಆಗಿದೆಯೆಂದು ಹೇಳಿ, ಕಬ್ಬಿನ ರಸರೂಪದಲ್ಲಿ ಪ್ರವಹಿಸಿ ಶ್ರೀನಿವಾಸನ ದಯೆಯು ವೆಂಕಟಾಚಲದ ರೂಪದಲ್ಲಿ ಕಲ್ಲುಸಕ್ಕರೆಯಂತೆ ಹೆಪ್ಪುಗಟ್ಟಿದೆ. ಇದು ಭಕ್ತರ ಮೇಲಿನ ಅನುಗ್ರಹಕ್ಕಾಗಿಯೇ ಎಂದು ಹೇಳಿದ್ದಾರೆ. ಶ್ರೀನಿವಾಸನು ಸ್ವಾತಂತ್ರ್ಯವನ್ನು ಕಳೆದುಕೊಂಡು ದಯಾದೇವಿಗೆ ವಶವಾಗಿರುವುದನ್ನು 'ಸ್ವಾಧೀನ ವೃಷಗಿರೀಶಾಂ' - ಎಂದು ಹೇಳಿ ನೀರಿಗೆ ಶೈತ್ಯ ಹೇಗೆ ಸ್ವಭಾವವೋ ಹಾಗೆಯೆ ವೆಂಕಟನಿಗೆ ದಯೆ ಎಂಬುದು ಸ್ವಾಭಾವಿಕ ಗುಣ, ಇದರಿಂದಲೇ ಇವನ ಇತರ ಗುಣಗಳು ಪ್ರಕಾಶಗೊಳ್ಳುವುವು. ಭಗವದ್ಗುಣಗಳೆಂಬ ದಯಾವರ್ಷದಿಂದಲೇ ಶ್ರೀನಿವಾಸನೂ ದಯಾನಿಧಿ, ಕಲ್ಯಾಣ ಗುಣಾಕಾರನಾಗಿರುವುದು. ಅವನ ಸ್ವರೂಪಕ್ಕೆ ಎರಡರಷ್ಟು ದೊಡ್ಡದು ದಯೆಯ ಸ್ವರೂಪ 'ಸ್ವರೂಪದ್ವೈಗುಣ್ಯಾದ್ವಿಗುಣ ನಿಜಬಿಂದು ಪ್ರಭವಸಿ' ಎಂದು ವರ್ಣಿಸಿರುತ್ತಾರೆ (61). ಇಂಥಾ ಗುಣಗಳನ್ನು ವೇದವೇ ಕೊಂಡಾಡುವಾಗ ದಯಾದೇವಿಯೂ ಎಲ್ಲರ ಮಹಾ ವಿಶ್ವಾಸಕ್ಕೆ ಪಾತ್ರಳಾಗುವಳು. ಇವಳು ಮೃದುಹೃದಯಿ,

ಪರದುಃಖವನ್ನು ಸಹಿಸಳು. ಶ್ರೀನಿವಾಸನ ಪಾದಗಳಿಂದ ಉದ್ಭವಿಸಿ ನಯನದಲ್ಲೇ ಇವಳು ಯಾವಾಗಲೂ ನೆಲೆಸಿ ಕರುಣೆ ತುಂಬಿರುವಂತೆ ಕಾಣುವಳು (19) ಇದೇ ಚಿತ್ತಾಕರ್ಷವಾಗಿ ಎಲ್ಲರನ್ನೂ ಪದೇ ಪದೇ ಬರುವಂತೆ ಮಾಡುವ ಅತೀಂದ್ರಿಯಗಳಾಗಿವೆ ಎಂಬ ಭಾವಾರ್ಥದಲ್ಲಿ ಮಾರನ್ ತಿರುವಿರುತ್ತಂನಲ್ಲಿ (45) 'ಪೆರುಂಕಳಿಲಾಲ್ ತಂ ಪೆರುಂಕಣ್ಮಲರ್ ಪುಂಡರೀಕಂ ನಮ್ಮೇಲ್' ಎಂದು ಅಭಿಪ್ರಾಯ ಪಡುತ್ತಾರೆ. ಅಂದರೆ ಪ್ರತಿ ಗುರುವಾರ ಎಲ್ಲರಿಗೂ ದಯಾದೇವಿಯ ಪ್ರತ್ಯಕ್ಷ ಕಟಾಕ್ಷಲಭ್ಯ ಎಂದು ಅರ್ಥ. ದಿನೇ ದಿನೇ ಏರುತ್ತಿರುವ ಯಾತ್ರಾರ್ಥಿಗಳ ಸಂಖ್ಯೆಗೆ ಇದೂ ಒಂದು ಕಾರಣವಾಗಿದೆ.

**ಮಹಿಮೆ** : ದಯಾದೇವಿಯ ಮಹಿಮೆಯನ್ನು ಹೇಳುವಾಗ ಶ್ರೀನಿವಾಸನ ಲೀಲಾವ್ಯಾಪಾರ ಮತ್ತು ಚೇತನೋದ್ಧಾರದಲ್ಲಿ ದಯೆಯ ಪಾತ್ರವನ್ನು ದೀರ್ಘವಾಗಿ ವಿವರಿಸುವರು. ಶ್ರೀನಿವಾಸನು ಸರ್ವಾಭೀಷ್ಟ ಫಲಪ್ರದ ನಾಗುವುದಕ್ಕೆ ದಯಾದೇವಿ ಕಾರಣ. ಇಂಥಾವಳಿಗೆ 'ಅಭಿಷ್ಟಾಮಿ' (10) ಎಂದು ಹೇಳಿ ತೂಪುಲ್ ಅಮ್ಮಾನ್ 'ನಿರಂತರವಾಗಿ ಸ್ತುತಿಸುವೆನು' ಎಂದು ಪ್ರತಿಜ್ಞೆ ಮಾಡುವರು. ಭಗವಂತನ ಸೃಷ್ಟಿಸ್ಥಿತ್ಯಾದಿಗಳು ದಯಾಪ್ರೇರಿತವಾದುದು. ಲೋಕ ಕಲ್ಯಾಣಕ್ಕಾಗಿ ಆಗುವ ಅವತಾರಗಳಲ್ಲೆಲ್ಲಾ ಇವಳು ಅನುಪ್ರವೇಶ ಮಾಡುವಳು. ಅವತಾರಗಳಲ್ಲಿ ಇವಳ ಪ್ರತ್ಯಯವೇನು ಎಂಬುದನ್ನು ವೆಂಕಟನಾಥರು 10 ಪದ್ಯಗಳಲ್ಲಿ (80-90) ಹೇಳಿ ಅಲ್ಲಲ್ಲಿ ಅದ್ಭುತ ಹೋಲಿಕೆಗಳನ್ನು ಕೊಡುವರು. ಇಡೀ ಪ್ರಕೃತಿಯೇ ಚಿತ್ರಪಟವೆಂದೂ ದಯಾದೇವಿಯೇ ಕುಂಚ ಮತ್ತು ಶ್ರೀನಿವಾಸನೇ ವರ್ಣಶಿಲ್ಪಿ (50). ದಯೆ ಗಂಗೆಗಿಂತಲೂ ಪವಿತ್ರವಾದುದು. ಗಂಗೆ ಲೋಕವನ್ನು ಪಾವನಗೊಳಿಸಿದರೆ, ದಯಾದೇವಿ ಮುಲ್ಲೋಕಗಳನ್ನು ಸಂರಕ್ಷಿಸುವವಳಾಗಿದ್ದಾಳೆ. ಇಬ್ಬರೂ ಶ್ರೀನಿವಾಸನ ಪಾದೋದ್ಭವೆಯರು. ಗಂಗಾ ಪ್ರವಾಹದಲ್ಲಿ ಹಂಸ ಮತ್ಸ್ಯ ಕೂರ್ಮ ಇತ್ಯಾದಿ ಅವತಾರಗಳೇ ಇವೆ! 'ಪ್ರಕಟಿತ ಹಂಸ ಮತ್ಸ್ಯ ಕಮಠಾದ್ಯಾವತಾರ ಶತಾವಿಬುಧ ಸರಿಚ್ಛಿಯಂ' (55). ಕರುಣಾಕಾಕುತ್ಸ್ಥ, ರಿಪುಣಾಮಪಿವತ್ಸಲಃ - ಎಂದು ಪ್ರಕಾಶಿತ ನಾಗಿರುವುದು, ಸೇತು ನಿರ್ಮಾಣವಾಗಿರುವುದೂ ಇವಳಿಂದಲೇ. ಶಿಕ್ಷೆ ಕೊಡುವಾಗಲೂ ರಕ್ಷಣೆಯನ್ನೇ ಮನಸಿನಲ್ಲಿಟ್ಟುಕೊಂಡಿರುವನು. ಸಾಗರಂ ಶೋಷಯಿಷ್ಯಾಮಿ ಎಂದು ಶ್ರೀರಾಮ ಬ್ರಹ್ಮಾಸ್ತ್ರವನ್ನು ಹೂಡಿದಾಗ, ಸಮುದ್ರರಾಜನು ಓಡಿಬಂದು ಶರಣಾದ. ಹೂಡಿದ ಶಸ್ತ್ರವನ್ನು ಸಾಗರರಾಜನ ಶತ್ರುಗಳ ವಧೆಗಾಗಿ ಉಪಯೋಗಿಸಿದ್ದು ಇವಳಿಂದಲೇ. ದಯೆಗೆ ಪರತಂತ್ರನಾದಮೇಲೆ ಭಕ್ತರ ಅಪಕಾರಗಳನ್ನು ಒಂದನ್ನೂ ಎಣಿಕೆಗೆ ತೆಗೆದುಕೊಳ್ಳುವುದಿಲ್ಲ. 'ನ ಸ್ಮರತ್ಯಪಕಾರಾಣಾಂ ಶತಮಪ್ಯಾತ ವತ್ತಯಾ' ಎಂದು ಹೇಳಿ ಶ್ರೀರಾಮನ ಗುಣಗಳಲ್ಲಿ ದಯೆಯನ್ನು ಉಲ್ಲೇಖಿಸಿರುತ್ತಾರೆ (64). ಸೀತಾಮಾತೆಯಲ್ಲಿ ಅಸಹ್ಯಾಪಚಾರ ಪಟ್ಟವನಿಗೆ ಕೊಟ್ಟ ಲಘು ದಂಡನೆ ದಯಾಪ್ರೇರಿತವಾದುದು. ವಿಧಿಸುವ ಶಿಕ್ಷೆ ಫಲಕಾರಿ ಯಾಗುವುದು ದಯಾದೇವಿಯ ವಿಲಾಸದ ವೈಭವವೇ ಸರಿ. ಪ್ರಹ್ಲಾದನಂಥ ಮಹಾಭಕ್ತನ ಮೇಲೆ ಜಾಯಮಾನಕಟಾಕ್ಷವಾಗಿದ್ದು ಕ್ರಮೇಣ ನಾರದ ಮಹರ್ಷಿಗಳಿಂದ ಮಾರ್ಗದರ್ಶನವಾಗಿದ್ದೂ ಇವಳ ಕಾರ್ಯವೇ. ಪಾಪಗಳಿಂದ ಮೂರ್ಛೆ ಹೋದವರಿಗೆ ದಯಾದೇವಿ ಸಂಜೀವಿನಿ ಇದ್ದಂತೆ. (12) ಈ ಸಿದ್ಧೌಷದ ಅಂಜನಗಿರಿಯಲ್ಲಿ ಪ್ರಕಾಶಿಸಿದೆ. ಇವಳ ಪ್ರಭಾವಕ್ಕೊಳಗಾದವನನ್ನು ಶ್ರೀನಿವಾಸ ಕ್ಷಮಿಸುವನು. ದಶಾವತಾರಿಯಾದ ವೃಷಗಿರಿಪತಿಯು ಹಿಂದೆ ಗುಹ, ಸುಗ್ರೀವ, ಶಬರಿ, ಕುಚೇಲ, ಕುಬ್ಜೆ ಗೋಪಿಯರ ಜೊತೆ ಸಮರಸವಾಗಿ ಮೆರೆದು ಸೌಶೀಲ್ಯ ತೋರಿದ್ದು ಇವಳಿಂದಲೇ. 72 - 73 ನೆ ಪದ್ಯಗಳಲ್ಲಿ ಕವಿ ಸಿಂಹರು ದಯಾದೇವಿಯನ್ನು ಏಣಿಗೆ ಹೋಲಿಸುವರು. ಊರ್ಧ್ವಗತಿಗೇರಲು ಹಾಗೂ ಭಗವಂತನು ವಿಭವ - ಅರ್ಚಾವತಾರಿಯಾಗಿ ಇಳಿಯಲು ದಯೆ ಎಂಬ ಏಣಿ ಸಹಾಯ ಮಾಡುವುದು. ಕೇವಲ ಕರುಣೆ ಯಿಂದಲೇ ವೈಕುಂಠವನ್ನು ನಿರ್ಗಮಿಸಿ ಸಪ್ತಗಿರಿಯಲ್ಲಿ ನಿಂತು ಆ ಪರಿಸರದಲ್ಲಿರುವ ಜೀವಿಗಳೆಲ್ಲರನ್ನು ಕೃಪೆಮಾಡಲು ಸಂಕಲ್ಪ ಮಾಡಿದ್ದನ್ನು ಶ್ರೀಮದಾಚಾರ್ಯರು 'ದೇಹಿನಿ' (48) ಎಂದು ಹೇಳಿರುತ್ತಾರೆ. ಶ್ರೀನಿವಾಸನು ಯಾವರೀತಿ ಬಡವರ ಬಂಧು, ದೀನ ದಲಿತರ ದೈವವಾಗಿದ್ದಾನೆ ಎಂಬುದನ್ನು 'ಕೃಪಣಜನ....' ಎಂದು ಕರೆದಿರುವರು (14) ಅವನು ಸಕಲ ಜನರ ಬಂಧು ಎಂದು ಶ್ರುತಿಯೂ ಹೇಳಿದೆ.

1. ತ್ವಂಜಮಿರ್ಜನಾನಾಂ ಮಿತ್ರೋ ಅಸಿಪ್ರಿಯ : ಸಖಾಸಖೀಭ್ಯ ಈಢ್ಯ (ಋ I 75-4), 2. ಜಾಮಯ : (ಋ I 31-10) ಇಂದು ಲಕ್ಷಾಂತರ ಯಾತ್ರಾರ್ಥಿಗಳು ಧಾವಿಸಿ ಬರುವರು. ಇದರಲ್ಲೇನೋ ಇದೆ ಎಂದು ಕಲ್ಪಿಸಿಕೊಂಡು ಮಹಾತ್ಮೆ ಅಷ್ಟಾಗಿ ತಿಳಿಯದವರೆ ಹೆಚ್ಚು. ಧರ್ಮಸತ್ರದಲ್ಲಿ ತಂಗುವವರು, ಎಷ್ಟೇ ವಿಳಂಬವಾಗಲಿ ತಾಳ್ಮೆಯಿಂದ ಸರದಿ ಸಾಲಿನಲ್ಲೇ ಬಂದು ದರ್ಶನಮಾಡುವ ಬಡವರಿಗಾಗಿ ಹೆಚ್ಚು ದರ್ಶನ ವೇಳೆ ಮೀಸಲಾಗಿರಿಸುವುದು, ಅಂಗವಿಕಲರಿಗೆ ತಕ್ಷಣವೇ ದರ್ಶನ ಮುಂತಾದ ಸತ್ಕಾರ್ಯಗಳೆಲ್ಲ ಶ್ರೀನಿವಾಸನ ದಯೆಯಿಂದಲೇ. ಇಂಥವರು ನಿತ್ಯೈಶ್ವರ್ಯವಂತರಾಗಿರುವುದೂ ಆ ದಯೆಯಿಂದಲೇ. ಪಾಪಗಳನ್ನು ಕಡಿದು ಹಾಕುವುದರಿಂದಲೇ ವೆಂ+ಕಟ ಎಂದು ಹೇಳುವುದು. ಪಾಪಗಳನ್ನು ಜಯಿಸಲು ಸಪ್ತಗಿರಿಯನ್ನು ಶ್ರೀನಿವಾಸನೇ ಆಶ್ರಯಿಸಿರುವುದರಿಂದ ವೆಂಕಟಾದ್ರಿ ವಿಜಯಸ್ಥಾನವಾಯಿತು. ಆದ್ದರಿಂದ ದಯಾ ನದಿಯಾಗಿ ಸಪ್ತಗಿರಿಯಲ್ಲಿ ಹರಿಯುವ ನದಿಗಳು ಪಾಪನಾಶಿನಿ. ಉಚ್ಚನೀಚ ಭಾವನೆ ಇಲ್ಲದೆ ಸಮವಾಗಿ ಎಲ್ಲರ ಮೇಲೂ ಹರಿಯುವ ಕಲ್ಪಲತೆ ಇವಳು. ಈ ಪ್ರವಾಹಕ್ಕೆ ಸಿಗದ ವಸ್ತುವಿಲ್ಲ. ಯಾರೂ ಇದನ್ನು ತಡೆಯಲಾಗದು. ಶ್ರೀನಿವಾಸನನ್ನೇ ವಿಸ್ಮಯಗೊಳಿಸುವಂಥಾವಳು ಇವಳು. ಇದನ್ನು ದೇಶಿಕರು 'ಅವಾರ್ಯ' ಎಂದು ಹೇಳಿದ್ದಾರೆ. ಸಪ್ತಗಿರಿ ಪ್ರದೇಶದಲ್ಲಿ ಇಂದು ನಾವು ಕಾಣುತ್ತಿರುವ ನಗರಾಭಿವೃದ್ಧಿ, ವಿದ್ಯಾಸಂಸ್ಥೆಗಳು, ವಿಶ್ವವಿದ್ಯಾಲಯ, ವ್ಯಾಪಾರ ಸಂಕೀರ್ಣ, ಆಸ್ಪತ್ರೆಗಳು, ಯಾತ್ರಾರ್ಥಿಗಳಿಗಾಗಿ ಸ್ವರ್ಗಭೋಗವೋ ಎಂಬಂತೆ ಶ್ರೇಷ್ಠ ಗುಣಮಟ್ಟದ ಸೌಲಭ್ಯಗಳು 'ಬರ್ಡ್' ನಂತಹ ವಿಶೇಷ ಸಂಸ್ಥೆಗಳು, ಜೀರ್ಣೋದ್ಧಾರ ಎದುರು

ನೋಡುತ್ತಿರುವ ದೇವಸ್ಥಾನಗಳಿಗೆ ಅನುದಾನ, ದೇವಸ್ಥಾನಗಳಿಗೆ ಅರ್ಚಾಮೂರ್ತಿ ಹಾಗೂ ಕೊಡೆಗಳನ್ನು ಕೊಡುವುದು, ವಿದೇಶಗಳಲ್ಲಿ ತಿರುಪತಿ - ಇನ್ನೂ ಮುಂತಾದ ಸರ್ವಾಂಗೀಣ ಅಭಿವೃದ್ಧಿಕಾರ್ಯಗಳೆಲ್ಲವೂ ಶ್ರೀನಿವಾಸನ ದಯೆಯಿಂದಲೇ ಆಗಿರತಕ್ಕವು. ಮುಂಬರುವ ಭಯಂಕರ ವಿಪತ್ತುಗಳು ನಿವಾರಣೆಯಾಗ ಬೇಕಾದರೂ ದಯಾದೇವಿಯೇ ಕಾರಣ. ಇಲ್ಲಿ ದೇಶಿಕಾಚಾರ್ಯರು ಭಗವಂತನ ಸಂಕಲ್ಪವನ್ನು ನರ್ತಕಿಗೆ ಹೋಲಿಸಿ ಅವಳನ್ನು ಆಡಿಸುವ ದಯಾದೇವಿ ಪ್ರಳಯವೆಂಬ ಭಯಂಕರ ನರ್ತನವನ್ನು ತಪ್ಪಿಸಿ ಪ್ರಸನ್ನವೆಂಬ ನರ್ತನವನ್ನು ಕೈಗೊಳ್ಳುವಂತೆ ಮಾಡುವಳು ಎಂದು ಪ್ರತಿಪಾದಿಸುವರು (23) ಸಪ್ತಗಿರಿಯೇ ತಮ್ಮ ಶಾಶ್ವತವಾಸಸ್ಥಾನವಾಗಬೇಕೆಂದು ದಯಾದೇವಿ ಯನ್ನು ಪ್ರಾರ್ಥಿಸುವರು. ಇಲ್ಲಿಯೇ ಯಾವು ದಾದರೊಂದು ಸ್ಥಾವರ ಜಂಗಮವಾಗಿ ನೆಲೆಸುವ ಕುಲಶೇಖರಾಳ್ವಾರರ ಸ್ತುತಿ ಹಾಗೂ ಕೈಕಾಲುಗಳು ದೇಹ ಚೆನ್ನಾಗಿರುವಾಗಲೇ ವೇಂಗಡವನ್ನು ಚೆನ್ನಾಗಿ ಸೇವಿಸಬೇಕು ಎಂಬ ನಮ್ಮಾಳ್ವಾರ್, ಭಕ್ತಿಸಾರರ ಸ್ತುತಿಯನ್ನು ಆಚಾರ್ಯರು ಉಲ್ಲೇಖಿಸಿರುತ್ತಾರೆ. ಅವನ ಭಾರ್ಯೆಯರೂ ದಯೆಯ ಪ್ರತಿಬಿಂಬ ಎಂದು ಹೇಳಿ ಅಮ್ಮಾನ್ ಸ್ತ್ರೀಯ ಸಹಜ ಸ್ವಭಾವ ಕರುಣೆ ಎಂದು ಸಾಬೀತು ಪಡಿಸುವರು. ಆದ್ದರಿಂದಲೇ ಶ್ರೀನಿವಾಸನು ಇವಳಲ್ಲಿ ನಿರ್ವ್ಯಾಜವಾದ ಹಾಗೂ ಸ್ಥಿರವಾದ ಸ್ನೇಹವಿಟ್ಟಿರುವನು. ಇವಳ ಕಾರ್ಯವನ್ನು ಶ್ರೀ ಭೂ ನೀಳಾದೇವಿಯರು ಶ್ಲಾಘಿಸುವರು. ಇವಳಿಂದಲೇ ಬ್ರಹ್ಮೇಂದ್ರ ರುದ್ರರೇ ಮೊದಲಾದವರು ತಮ್ಮ ಪದವಿಗಳಲ್ಲಿ ಯಶಸ್ಸು ಪಡೆದಿರುವವರಾಗಿರುತ್ತಾರೆ. ಸ್ವರ್ಗಾದಿ ಫಲವನ್ನು ಬಯಸುವವರಿಗೂ ಫಲವನ್ನು ಕೊಡುವವಳು ಇವಳೇ. ಇಂಥಾ ದಯೆ ಮತ್ತಾರಲ್ಲಿಯೂ ಕಾಣಲಾಗದು. ಕಲ್ಕಿ ರೂಪಿಯಾದ ಶ್ರೀನಿವಾಸನು ಕರದಲ್ಲಿ ಹಿಡಿದಿರುವ ಕತ್ತಿ ಮಾಡುವ ವ್ಯಾಪಾರವೂ ದಯಾಪ್ರೇರಿತವಾದುದು. ಕಲಿಯುಗದ ತಾಪವನ್ನು ತೊಳೆದು ಹಾಕಿ ಕೃತಯುಗದ ಮೊಳಕೆಯನ್ನು ಹಾಕುವುದು. ಈ ಶಸ್ತ್ರವು ದಯೆ ಎಂಬ ಜಲದಲ್ಲಿ ಚೆನ್ನಾಗಿ ಸಂಸ್ಕರಿಸಲ್ಪಟ್ಟಿದೆ. ಇದರಿಂದ ದಯಾವರ್ಷವೇ ಆಗುವುದು. ಸ್ವಾಮಿ ದೇಶಿಕನ್ ಇಲ್ಲಿ ಶ್ರೀನಿವಾಸನ ಸರ್ವದೇವತಾ ಸಾರ್ವಭೌಮತ್ವ ವನ್ನು ಹೇಳಿ ಪರತತ್ವವನ್ನು ಪ್ರಕಾಶಪಡಿಸಿದ್ದಾರೆ.

ಚೇತನೋದ್ಧಾರದಲ್ಲಿ ದಯಾದೇವಿಯ ಪಾತ್ರವನ್ನು ರಸವತ್ತಾಗಿ ವಿವರಿಸಿರುವರು. ಪ್ರಥಮವಾಗಿ ದಯೆಯನ್ನು ಆಶ್ರಯಿಸುವ ಸಾರಜ್ಞರನ್ನು ಪ್ರಶಂಸಿಸಲಾಗಿದೆ (41) ಇವರಿಗೆ ಶ್ರೀನಿವಾಸನು ಶಾಸ್ತ್ರವೆಂಬ ಅವಲಂಬನವನ್ನು ಕೊಟ್ಟಿರುವನು. ಸಂಸಾರದಲ್ಲಿ ತೊಳಲಾಡು ವವರನ್ನು ಎತ್ತುವ ಕೈಯೇ ಶಾಸ್ತ್ರ. ಸಾರಜ್ಞನಾದವನು ಭಗವಚ್ಛಾಸ್ತ್ರವನ್ನು, ಆಜ್ಞೆಯನ್ನು ಎಂದಿಗೂ ಮೀರನು. ಈ



ವಿವೇಕಿಯು 'ತಸ್ಮಿನ್ ಪರಾವಾರೆ' ಎಂಬಂತೆ ದಯಾನಿಧಿಯನ್ನು ಆಶ್ರಯಿಸಿದ ಮೇಲೆ ಬೇರೆ ಸುಖಾನುಭವಗಳನ್ನು ನೋಡನು.'ಭಾವೋ ನಾನ್ಯತ್ರ ಗಚ್ಛತಿ' ಎಂದು ಭಾವಿಸಿಕೊಂಡು ನಿತ್ಯ ಕೈಂಕರ್ಯವೆಂಬ ಬ್ರಹ್ಮಾನಂದವನ್ನು ಪಡೆಯುವನು. ಇಂಥಾ ಜ್ಞಾನ ಸ್ವರೂಪವಾದ ಸ್ವತ್ವವು ನಮಗೆ ದೊರಕುವುದು ದಯೆಯಿಂದಲೇ 'ವಂದೇ ಚೈತನ್ಯಸತ್ತ್ವ ದಾಯಿನಿ' (16) ಎಂದು ಹೇಳುವರು ದೇಶಿಕರು. ಚೇತನರನ್ನು ಸಲಹುವಾಗ ಶ್ರೀನಿವಾಸನು ತನ್ನ ಶಕ್ತಿವೀರ್ಯಾದಿಗಳನ್ನು ಮರೆತು ಕರುಣೆಯನ್ನು ತೋರುವನು. ಭಗವನ್ನಿಗ್ರಹವನ್ನು ಮರೆಸಿ, ಅನುಗ್ರಹವನ್ನು ಮೆರೆಸುವ ಮಹಿಮೆ ದಯಾದೇವಿಗೆ ಮಾತ್ರ ಇದೆ. ಚೇತನರನ್ನು ಸಂಸಾರಸಾಗರದಿಂದ ದಾಟಿಸುವ ದಯಾದೇವಿ ಯನ್ನು ದೇಶಿಕರು 'ಸಂಸಾರತಾರಿಣೀಂ' ಎಂದಿದ್ದಾರೆ. 'ಅಹಂ ಸ್ಮರಾಮಿ ಮದ್ಭಕ್ತಂ' ಎಂದು ವರಾಹದೇವರು ಹೇಳಿರುವಂತೆ ತಿಳಿದೊ ತಿಳಿಯದೆಯೋ ಮಾಡಿದ ಸುಕೃತಗಳ ನೆಪಮಾಡಿಕೊಂಡು ಮೋಕ್ಷಾರ್ಥಿಯನ್ನು ತಾನೆ ಗುರುತಿಸಿ ಪುರುಷಾರ್ಥವನ್ನು ಕರುಣಿಸುವಳು. (20) ಸಂಸಾರಿ ಚೇತನರನ್ನು ಆಕರ್ಷಿಸಿ ವಶಪಡಿಸಿಕೊಳ್ಳುವ ಸಾಧನವಾದ ಶ್ರೀನಿವಾಸನ ದಿವ್ಯ ಮಂಗಳ ವಿಗ್ರಹವು ದಯಾದೇವಿಯ ಅಮೃತಾಂಶಸ್ವರೂಪ. (22) ಭಗವದ್ಭಾಗವತ ವಿರೋಧಿಗಳಿಗೆ ಇವಳು ದೂರವಿರುವಳು. ದಯಾದೇವಿ ಸಮೀಪದಲ್ಲೇ ಸದಾಕಾಲವೂ ಇದ್ದರೂ ಇಂಥವರು ಗಂಗೆ ಹರಿಯುತ್ತಿದ್ದರೆ ಬೇರೆ ಕಡೆ ಬಾಯಾರಿಕೆಗಾಗಿ ಹೋಗುವರು. ಅವಿದ್ಯೆ - ಅಜ್ಞಾನದಿಂದುಂಟಾದ ದುಷ್ಕೃತಗಳನ್ನು ಮಾಡಿದವನು ತಾನು ಮಾಡಿದ ಅಪರಾಧಗಳಿಗೆ ಭಯಪಡುವನು. ನಷ್ಟಸ್ಮೃತಿಯಲ್ಲಿರುವವನು ಹಾಗೂ ಯಾರಲ್ಲಿ ಅಪರಾಧ ಅಧಿಕ ವಾಗಿದೆಯೋ ಅವರು ಶ್ರೀನಿವಾಸನ ದಯೆಯನ್ನು ಎದುರು ನೋಡುತ್ತಾರೆ. ಇಲ್ಲಿ ಶ್ರೀನಿವಾಸನು ನ್ಯಾಯಾಧೀಶನ ಸ್ಥಾನ ದಲ್ಲಿರುತ್ತಾನೆ. ದಯಾದೇವಿಯು ಅಪರಾಧಿಯ ಪರವಾಗಿ ವಾದಮಾಡಿ ಶ್ರೀನಿವಾಸನು ಕೊಡುವ ತೀರ್ಪನ್ನು ಇವನ ಪರವಾಗಿರುವಂತೆ ಮಾಡುವಳು. ಪಾದಗಳನ್ನು ಆಶ್ರಯಿಸಿ ಬಂದವರ ಪಾಪಗಳು ಪರಿಹಾರವಾಗುವುದು ಎಂಬ ಪ್ರಮಾಣವನ್ನು ಮುಂದಿಟ್ಟು ಅಂಥಾ ಚೇತನರಿಗೆ ಸದ್ಗತಿ ಕೊಡಬೇಕೆಂದು ವಾದಮಾಡುವ ವಕೀಲಳಾಗಿದ್ದಾಳೆ. (33) ಎಂಥಾ ದುರ್ವಿನೀತರ ಮೇಲೂ ಕೃಪೆಮಾಡುವ ಕಾಮಧೇನು ಇವಳು. ಶ್ರೀನಿವಾಸನನ್ನು ಬೇಟೆಗಾರನಿಗೆ ಹೋಲಿಸಲಾಗಿದೆ. ಪ್ರಾಣಿಗಳು ಎಲ್ಲೇ ಹೋಗಲಿ ಬಲೆ ಬೀಸಿ ಕಟ್ಟಿಹಾಕುವಂತೆ ಇಂಥಾ ಅಪರಾಧ ಚಕ್ರವರ್ತಿಗಳನ್ನು ಶ್ರುತಿ 'ಅವಿದ್ವಾಂಸಃ' ಎಂದು ಕರೆದಿದೆ. (ಋ vi 15-10) ತೂಪುಲ್ ಅಮ್ಮಾನ್ 52 ನೆ ಪದ್ಯದಲ್ಲಿ ದಯೆ - ಸಂಸಾರಸಾಗರ ದಾಟುವ ಸೇತುವೆ ಎಂದು ಹೇಳಿದ್ದಾರೆ. ಪ್ರತ್ಯಕ್ಷವಾಗಿ ಗುಪ್ತಗಾಮಿನಿಯಾಗಿ ಹರಿಯುವ ಸರಸ್ವತಿ ನದಿಗೆ

ದಯೆಯನ್ನು ಹೋಲಿಸಿ, ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಇವಳು ಚೇತನೋದ್ಧಾರ ಮಾಡುವಳು. ವೃಷಗಿರೀಶದಯೇ ಭವತಿ ಸಪದಿ ಸರಸ್ವತೀವ ಶಮಯತ್ವಮ ಘಮಪ್ರತಿಮಮ್' ಎಂದು ಹೇಳಿ ಇವುಗಳನ್ನು ಆಶ್ರಯಿಸಿದವರಿಗೆ ಫಲಪ್ರಾಪ್ತಿ ತಪ್ಪದು ಎಂದು ಹೇಳುತ್ತಾರೆ. ಮತ್ತೊಂದು ಕಡೆ ಇವಳು ಸಂಸಾರ ಸಾಗರ ದಾಟುವ ನೌಕೆ ಎಂದು ಹೇಳುವರು. (38) ಭಗವಂತನು ನಮ್ಮನ್ನುಪಾರುಮಾಡುವ ಸುಭದ್ರ ನೌಕೆ ಎಂದು ಶ್ರುತಿ ವಾಕ್ಯವಿದೆ. 'ಸುಪ್ರಣೀತಿ ನಾವಂಸ್ವರಿತ್ರಾಂ ಅನಾಗಸಂ ಅಸ್ತವತೀಂ' (ಋ X 63-10).

ದುಷ್ಕೃತಗಳನ್ನು ಮಾಡಿದವರ ಮೇಲೆ ಶ್ರೀನಿವಾಸನು ಕೋಪಗೊಂಡಾಗ ದಯೆ ಯಾವ ರೀತಿ ಶಾಂತಗೊಳಿಸುವಳು ಎಂಬುದನ್ನು ಸ್ವಾಮಿ ದೇಶಿಕನ್ ವಿವರಿಸುವರು. ''ಅದು ಸ್ವರೂಪತಃ ಕೋಪವಲ್ಲ. ಸಮುದ್ರದ ಮೇಲ್ಭಾಗ ಬಿಸಿಯಾಗಿದ್ದರೂ ಒಳಭಾಗ ತಂಪಿನಿಂದ ಕೂಡಿರುತ್ತೆ. ಮೇಲಿನ ನೋಟಕ್ಕೆ ಮಾತ್ರ ಅದು ಕೋಪ.'' ಎಂಥಾ ಮಹತ್ತರ ಪಾಪಗಳು ಶೀನಿವಾಸನ ಕರುಣೆಯಿಂದ ಕರಗುವಂಥಾದ್ದು. ಇವುಗಳಿಂದ ಪಾರುಮಾಡುವೆನು ಎಂದು ಪ್ರತಿಜ್ಞೆ ಮಾಡುವಂತಿದ್ದಾಳೆ ಇವಳು. ದಯೆ ಪ್ರವಹಿಸಬೇಕಾದರೆ ಅವನ ಪಾದಗಳನ್ನು ಆಶ್ರಯಿಸಬೇಕು. ಇಂಥವರಲ್ಲಿ ಮಾತ್ರ ದಯೆಗೆ ವ್ಯಾಮೋಹವಿರುತ್ತದೆ. ಶ್ರೀನಿವಾಸನೆಂಬ ಸರೋವರದಲ್ಲಿ ದಯೆ ಎಂಬ ಅಮೃತವಿದೆ. ಇದು ಸಕಲ ತಾಪಪರಿಹಾರಿ ಹಾಗೂ ನಿತ್ಯಶೀತಲವಾದುದು. ವಿಶ್ವಾಸಿಗಳು ಇದನ್ನಾಶ್ರಯಿಸಿ ಭಗವದನುಭವವನ್ನು ಸವಿಯುವರು. ಸಪ್ತಗಿರಿ ಎಂಬ ಕ್ರೀಡಾಶೈಲದಲ್ಲಿ ಈ ದಿವ್ಯಸರೋವರವಿದೆ.

'ಏಷ ಬ್ರಹ್ಮಪ್ರವಿಷ್ಟೋಸ್ಮಿ
ಗ್ರೀಷ್ಮೇ ಶೀತ ಮಿಹಹ್ರದಮ್'

ಪ್ರಪನ್ನನು ಶ್ರೀನಿವಾಸನ ದಯೆಯನ್ನು ಚಾತಕ ಪಕ್ಷಿಯಂತೆ ಆಶ್ರಯಿಸುವನು. ಶ್ರೀನಿವಾಸನೆಂಬ ಕಾಳಮೇಘದಿಂದ ಬರುವುದೇ ದಯಾವರ್ಷ, ಶರಣಾರ್ಥಿಯಲ್ಲಿ ದೋಷ ವಿದ್ದಲ್ಲಿ ಇವಳ ಶಿಫಾರ್ಸಿನಂತೆ ಶ್ರೀನಿವಾಸನು ಅಂಥವರಿಗೆ ಲಘುದಂಡನೆಯನ್ನು ವಿಧಿಸುವನು. ಕೊನೆಯದಾಗಿ ಹೇಳುವರು. ಇವಳನ್ನರಿಯಲು ವಾಲ್ಮೀಕಿ ಪರಾಶರ ವ್ಯಾಸಾದಿ ಗಳಿಗೇ ಆಗಲಿಲ್ಲ. ಆ ದಯಾಸಾಗರ ದಲ್ಲಿಳಿಯಲು ಹೋಗಿ ಹೆದರಿ ದಡದಲ್ಲೇ ನಿಂತುಬಿಟ್ಟರು. ಎಂದು ಹೇಳಿ ಮಹಿಮೆಯನ್ನು ಮುಗಿಸುವರು. 'ಪ್ರಾಚೇತಸ ಪ್ರಭೃತಯ ಅಪಿ ಪರಂ ತಟಸ್ಥಾಃ' (103).

ಹೀಗೆ ತೂಪುಲ್ ಅಮ್ಮಾನ್ ದಯಾದೇವಿ ಯನ್ನು ಭಗವಂತನ ಭಾರ್ಯೆ ಯಾಗಿ, ಚೇತನ - ಪ್ರಪನ್ನರ ಮಾತೃವಾಗಿ, ಸದ್ಗತಿಗೇರಲು ವಾಣಿಯಾಗಿ, ಸಂಸಾರ ಸಾಗರ ದಾಟುವ ನೌಕೆ - ದೋಣಿ - ಸೇತುವಾಗಿ, ಭೇದಭಾವವಿಲ್ಲದೇ ಎಲ್ಲರಿಗೂ ಫಲಕೊಡುವ ಕಾಮಧೇನುವಾಗಿ ಕೇಳಿದ್ದು ಕೊಡುವ ಕಲ್ಪವೃಕ್ಷವಾಗಿ ಇನ್ನೂ ಅನೇಕ ದೃಷ್ಟಿಕೋನಗಳಿಂದ ನೋಡಿ ಶ್ಲಾಘಿಸಿರುವರು.

ವೇದಾಂತಾಚಾರ್ಯರು ತಾವು ಚೇತನ ಪ್ರಪನ್ನನ ಸ್ಥಾನದಲ್ಲಿದ್ದಂತೆ ಭಾವಿಸಿಕೊಂಡು 'ನಮ್ಮ ಸ್ವರೂಪಸ್ಥಿತಿ ದಯಾದತ್ತವಾದುದು' ಎಂದು ಹೇಳಿ ಪಶ್ಚಾತ್ತಾಪ ಬುದ್ಧಿಯಿಂದ ದಯಾದೇವಿಯ ಮುಂದೆ ಅಂಜಲಿಬದ್ಧರಾಗಿ ನಿಂತು, ಅ) ಅಮ್ಮಾ ನಿನಗೆ ಅರ್ಪಿಸಲು ನನ್ನಲ್ಲಿ ನನ್ನ ಅಪರಾಧಗಳನ್ನು ಬಿಟ್ಟರೆ ಬೇರೇನೂ ಇಲ್ಲ. ಇವನ್ನು ನಿನಗೆ ಅರ್ಪಿಸುವೆನು. ಸ್ವೀಕರಿಸುವೆಯಾ ನೀನು ಕಟಾಕ್ಷಿಸದಿದ್ದರೆ ನಾನು ಬದುಕಲಾರೆ ನೀನೇ ಸಾಕ್ಷಾತ್ತಾಗಿ ಕ್ಷಮಿಸು' ಎಂದು ಅನುಪಮವಾಗಿ ಬೇಡಿದ್ದಾರೆ (97). ಆ) ಅಪರಾಧ ಚಕ್ರವರ್ತಿಗಳಾದ ನಮ್ಮನ್ನು ಕಾಪಾಡಲು ಮನಸ್ಸು ಮಾಡಿ ಶ್ರೀನಿವಾಸನನ್ನು ಪರವಶಗೊಳಿಸು ಎಂದು 29 ನೇ ಪದ್ಯದಲ್ಲಿ ಬೇಡುವರು. ಇ) ಮದಗಜವನ್ನು ಸರಪಳಿಯಿಂದ ಕಟ್ಟಿಹಾಕುವಂತೆ ನನ್ನನ್ನು ಬಂಧಿಸಿ ಎಳೆದುಕೊಂಡು ಹೋಗು. ನೀನೇ ನನ್ನನ್ನು ಬಲಾತ್ಕಾರದಿಂದ ಸ್ವೀಕರಿಸು ಎಂದು ಪ್ರಾರ್ಥಿಸಿರುವರು.

ಇಡೀ ಕೃತಿಯಲ್ಲಿ ದೇಶಿಕರು ಶ್ರೀ ವೈಷ್ಣವ ಸಿದ್ಧಾಂತವನ್ನು ಒಂದಲ್ಲ ಒಂದು ರೀತಿಯಲ್ಲಿ ಪ್ರಕಾಶಪಡಿಸಿದ್ದಾರೆ. 1) ಪ್ರಾರಂಭ ಶ್ಲೋಕದ ಪ್ರಥಮ ಪದವಾದ 'ಪ್ರಪದ್ಯೇ' ಸಿದ್ಧಾಂತದ ತಿರುಳೇ ಆಗಿದೆ. 2) ಶ್ರೀನಿವಾಸನ ಕರುಣಾಪ್ರವಾಹದಿಂದಲೇ ಉದಿಸಿರುವ ಗುರು ಪರಂಪರೆಯಲ್ಲಿ ವಿರಾಜಿಸುವವರೆಲ್ಲರಿಗೂ ವಂದಿಸುವರು. ಮೊದಲಿಗೆ ಪ್ರಥಮಾ ಚಾರ್ಯನಾದ ಶ್ರೀನಿವಾಸ, ಇವನ ಭಾರ್ಯೆಯರು, ಮಹರ್ಷಿಗಳು, ವಿಷ್ವಕ್ಸೇನ, ಆಳ್ವಾರಾಚಾರ್ಯರಿಗೆ ವಂದಿಸಿ ಇವರೆಲ್ಲರೂ ದಯಾದೇವಿಯ ಮಹಿಮೆಗೆ ಒಳಗಾಗಿ ಭಗವದ್ದಯೆಯನ್ನು ಸಮಸ್ತ ಲೋಕಗಳಿಗೂ ವ್ಯಾಪಿಸುವಂತೆ ಮಾಡಿರುವರು. 3) ಕೆಲವು ವೇಳೆ ದಯೆ ಆಚಾರ್ಯರೂಪ ತಾಳಿ ಪಂಚ ಸಂಸ್ಕಾರ ಭರನ್ಯಾಸಗಳ ಮೂಲಕ ಸದ್ಗತಿಗೇರಲು ಕಾರಣವಾಗುವುದು. 4) ಬ್ರಹ್ಮಾನಂದ ಅನುಭವ, ಮಹಾವಿಶ್ವಾಸ, ಲಘುದಂಡನೆ, ಸರ್ವೇಶ್ವರತ್ವ, ಸಂಸಾರಬಂಧನ ಭಗವ ದ್ವಿರೋಧಿಗಳು ಸುಕೃತ - ದುಷ್ಕೃತಗಳು ಇನ್ನೂ ಮುಂತಾದ ಪದಗಳು ಸಿದ್ಧಾಂತ ಪ್ರಕಾಶ ಗೊಳಿಸುವಂಥವು.

**ಫಲಶ್ರುತಿ :** ಶ್ರೀನಿವಾಸಸ್ವಾಮಿಯು ಶ್ರೇಷ್ಠ ರೀತಿಯ ದಯಾನಿಧಿ ಎಂಬುದನ್ನು ಎಲ್ಲರಿಗೂ ತಿಳಿಸುವುದೇ ದೇಶಿಕಾಚಾರ್ಯರ ಮುಖ್ಯ ಉದ್ದೇಶ. ಭಕ್ತಿಯ ಪರವಶತೆಯ ಆವೇಶದಲ್ಲಿ ಸ್ತೋತ್ರದ ಜೊತೆಗೆ ಕಾವ್ಯವನ್ನು ವಿಸ್ತರಿಸಿರುತ್ತಾರೆ. ಅಸಂಖ್ಯಾತ ಭಕ್ತರು ಭಗವಂತನ ಕರುಣೆಯನ್ನು ಕುರಿತು ಹಾಡಿರುತ್ತಾರೆ. ಆದರೆ ಹಾಗೆ ಹಾಡಿರುವುದೆಲ್ಲವೂ ಕಾವ್ಯವಾಗಿಲ್ಲ. 'ಯ ಖ್ಯಾತಿ ಲಾಭ ಪೂಜಾಸು' ಎಂಬಂತೆ ತಾವು ಖ್ಯಾತಿಗಾಗಿ ಇದನ್ನು ಸ್ತುತಿಸಿ ರಚಿಸಿಲ್ಲ. ಭಕ್ತಿಯಿಂದಲೇ ರಚಿಸಿದ ದೋಷರಹಿತವಾದ ಸ್ತುತಿ ಇದು. ಉದಾರವಾದುದು, ವೇದಾಂತ ತಾತ್ಪರ್ಯ ಪ್ರತಿಪಾದಿಸುವಂಥಾದ್ದು, ಶ್ಲಾಘನೀಯ ವಾದುದು, ಮಹಿಮಾಯುತವಾದುದು, ಸಾತ್ವಿಕರಿಗೆ ರೋಚಕವಾದ ಸ್ತುತಿ ಇದು. ಸತ್ಯವಾದಿಗಳೂ ಭಕ್ತೋತ್ತಮರೂ ಆದ ವೆಂಕಟನಾಥರಿಂದ ಉದಿತವಾದ ಈ ಕೃತಿಯನ್ನು ನಿತ್ಯಾನುಸಂಧಾನ ಮಾಡುವವರಿಗೆ ದಯಾಮಾತೆ ಖಂಡಿತ ಪ್ರಸನ್ನಳಾಗುವಳು. ಈ ಕೃತಿ ಪ್ರತಿಪಾದಿಸುವ ವಿಷಯ ವೈಭವದ ಕಾರಣ ಇದು ಸರ್ವರಿಂದಲೂ ಸೇವಿಸಲು ತಕ್ಕುದಾಗಿದೆ.

ವೃಷಶೈಲನಾಥ ದೈಯಿತೇ ದಯಾನಿಧೇ

★★★★★

# ಆನಂದದ ದಶರಿ ಹಬ್ಬ

ಭಾರತದಲ್ಲಿ ಆಚರಿಸುವಷ್ಟು ಹಬ್ಬ ಉತ್ಸವಗಳನ್ನು ಇತರೆಡೆಗೆ ಆಚರಿಸುವುದಿಲ್ಲ. ಹೆಚ್ಚಾಗಿ ಪ್ರತಿ ತಿಂಗಳಲ್ಲಿ ಒಂದೊಂದು ಹಬ್ಬ ವ್ರತಗಳು ಇದ್ದೇ ಇರುತ್ತದೆ.

ದೇಶದ ತುಂಬ ಆಚರಿಸುವ ದಸರೆ ಹಬ್ಬವು ಭಾರತೀಯರಿಗೆ ತುಂಬಾ ದೊಡ್ಡದು. ಈ ಉತ್ಸವಕ್ಕೆ ದೇಶದ ವಾತಾವರಣವು ತೀರ ಅನುಕೂಲವಿರುತ್ತದೆ. ಮಳೆಯು ಕಡಿಮೆ ಯಾಗಿರುತ್ತದೆ. ಹೊಲದಲ್ಲಿ ಬೆಳೆಗಳು ತಲೆ ಎತ್ತಿ ನೆಮ್ಮದಿಯಿಂದ ನಿಂತಿರುತ್ತದೆ. ಇಡೀ ಸೃಷ್ಟಿಯು ಹಸಿರು ಸೀರೆಯನ್ನು ಉಟ್ಟಂತೆ ಕಂಗೊಳಿ ಸುವುದು. ಭಕ್ತಿಯ ಮಾಸವಾದ ಶ್ರಾವಣದಿಂದ ಹಬ್ಬ ವ್ರತಗಳ ಸರಮಾಲೆಯೇ ಬಂದೊಗುತ್ತದೆ. ನವರಾತ್ರ್ಯೋತ್ಸವವು ಕನ್ನಡ ನಾಡಿನಲ್ಲಿ ನಾಡಹಬ್ಬ ಎಂದು ಆಚರಣೆ ಗೊಳ್ಳುತ್ತಿದೆ.

ನವರಾತ್ರ್ಯೋತ್ಸವವನ್ನು ಮಾರ್ಕಂಡೇಯ ಮುನಿಗಳು ದೇವಿ ಪೂಜೆ ನಿಮಿತ್ತವಾಗಿ ಪಾರ್ವತಿಯ ಪ್ರತೀಕವಾಗಿ ಘಟಸ್ಥಾಪನೆ ಮಾಡಿ ಒಂಭತ್ತು ದಿವಸ ಉತ್ಸವ ಆಚರಿಸಿದ ಉಲ್ಲೇಖವು ಮಾರ್ಕಂಡೇಯ ಪುರಾಣದಲ್ಲಿದೆ. ತ್ರೇತಾ ಯುಗದಲ್ಲಿ ಆದಿ ಮಾಯೆಯು ಎಂದರೆ ಆದಿಶಕ್ತಿ ದೇವಿಯು ಎಲ್ಲರನ್ನು ಬಗ್ಗುಬಡಿಸಿದ ಮಹಿಷಾ ಸುರ ದೈತ್ಯನೊಡನೆ ಘನಘೋರ ಯುದ್ಧ ಮಾಡಿ ನವರಾತ್ರಿಯಲ್ಲಿ ಆತನನ್ನು ಸಂಹರಿಸಿದಳು. ಹೀಗಾಗಿ ಎಲ್ಲವರೂ ಆನಂದಿತರಾದರು. ಆ ದೇವಿಯ ಹೆಸರಿನಿಂದ ಜನರು ನವ ರಾತ್ರ್ಯೋತ್ಸವವನ್ನು ಆಚರಿಸಿದರು.

ದೇಶದಲ್ಲಿಯ ಎಲ್ಲ ಪ್ರಾಂತ್ಯಗಳಲ್ಲಿ ಈ ದೇವಿಯ ಉತ್ಸವ ನಡೆಯುತ್ತದೆ. ಕಾಶ್ಮೀರದಲ್ಲಿ ಈ ದೇವಿಯನ್ನು ಭುವನೇಶ್ವರಿ ಎಂದು ಕರೆ ಯುತ್ತಾರೆ. ಹಿಮಾಚಲಪ್ರದೇಶದಲ್ಲಿ ದೇವಿ ಯನ್ನು ಗುಹೇಶ್ವರಿ, ಉತ್ತರಭಾರತದಲ್ಲಿ ವಿಶಾಲಾಕ್ಷಿ, ಮಧ್ಯಪ್ರದೇಶದಲ್ಲಿ ಮಹಾಕಾಳಿ, ಗುಜರಾತದಲ್ಲಿ ಲಲಿತಾದೇವಿ, ಮಹಾರಾಷ್ಟ್ರದಲ್ಲಿ ಭವಾನಿದೇವಿ, ಕರ್ನಾಟಕದಲ್ಲಿ ಚಾಮುಂಡಾ ದೇವಿ, ತಮಿಳುನಾಡಿನಲ್ಲಿ ಕನ್ಯಾಕುಮಾರಿ, ಕೇರಳದಲ್ಲಿ ಶಾರದಾದೇವಿ, ಗೋವೆಯಲ್ಲಿ ಶಾಂತಾದುರ್ಗಾ, ಬಂಗಾಳದಲ್ಲಿ ದುರ್ಗಾದೇವಿ, ಹೀಗೆ ಅನೇಕ ನಾಮುಗಳಿಂದ ಪ್ರಸಿದ್ಧಿ ಹೊಂದಿದರೂ ಅವಳು ಆದಿಶಕ್ತಿದೇವಿ.

ಸಮರ್ಥ ರಾಮದಾಸರು ದೇವಿಯನ್ನು ವರದಾಯನಿ ಎಂದು ಕರೆದರೆ ಶಂಕರಾಚಾರ್ಯ ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದರುಗಳು ದೇವಿಯನ್ನು ಪೂಜ್ಯೆ ಎಂದು ಗೌರವಿಸಿದ್ದಾರೆ.

ದಸರೆಯ ದಿವಸದಂದು ಸೀಮೋಲ್ಲಂಘ ನೆಯ ಪ್ರಥೆಯು ಇದರ ಪಾರ್ಶ್ವ ಭೂಮಿಯ ಮೇಲೆ ನಿಂತಿದೆ. ದಸರೆಯ ಹಿಂದಿನ ದಿನ ಮಹಾನವಮಿಯ ದಿನದಂದು ಈ ಹಿಂದೆ ಅಡಗಿಸಿಟ್ಟಿದ್ದ ಶಸ್ತ್ರಾಸ್ತ್ರಗಳನ್ನು ಪಾಂಡವರು ಹೊರತೆಗೆದು ಅದನ್ನು ಪೂಜಿಸಿದರು. ಪಾಂಡವರಿಗೆ ಅಜ್ಞಾತವಾಸವು ಮುಗಿದಿದ್ದರಿಂದ ತಮ್ಮ ಅಸ್ತಿತ್ವವನ್ನು ಸಿದ್ಧಗೊಳಿಸುವುದಕ್ಕಾಗಿ ದಸರೆಯ ದಿನದಂದು ಹೊರಗೆ ಬಂದರು.

**- ಅ. ಚಿ. ಜ್ಯೋತಿಷೀ.**

ಹಿಂದಿನ ಕಾಲದಲ್ಲಿ ರಾಜಮಹಾರಾಜರು ಯುದ್ಧಕ್ಕಾಗಿ ಈ ದಿನದಂದು ಹೊರಗೆ ಹೋಗುತ್ತಾರೆ. ಅಂದು ಶುಭದಿವಸ ಮತ್ತು ವಿಜಯವನ್ನು ದೊರಕಿಸುವ ದಿವಸ ಹಾಗೂ ಸೈನ್ಯದೊಳಗಿನ ಉತ್ಸಾಹ ಜಾನುವಾರುಗಳ ಉತ್ತಮ ಆರೋಗ್ಯಕ್ಕೆಂದು ದಸರೆಯ ದಿನದಂದು ಸೀಮೋಲ್ಲಂಘನ ಮಾಡುತ್ತಿದ್ದರು.

ವಿಜಯದಶಮಿ ದಿನದಂದು ರಾಜಮಹಾ ರಾಜರುಗಳು ಸೀಮೋಲ್ಲಂಘನ ಮಾಡಿ ಹೊರರಾಜ್ಯದ ಮೇಲೆ ದಾಳಿ ಮಾಡುತ್ತಿದ್ದರು. ಅಂದು ಸಾಯಂಕಾಲದಲ್ಲಿ ಜನರು ದರಬಾರ ಶೈಲಿಯಲ್ಲಿ ಊರ ಹೊರಗೆ ಹೋಗುತ್ತಿದ್ದರು. ಶಮಿಯ ವೃಕ್ಷದಡಿ ಪೂಜೆ ಮಾಡಿ ಶಮಿ ಎಲೆಯನ್ನು ಬಂಗಾರವೆಂದು ಭಾವಿಸಿ ಹಂಚುತ್ತಿದ್ದರು. ಮನೆಗೆ ಒಯ್ಯುವಾಗ ಆಪ್ತಮಿತ್ರರಿಗೆ ಶಮಿ ಎಲೆ ಹಂಚಿ ಬಂಗಾರ ಕೊಟ್ಟು ಬಂಗಾರದಂತೆ ಇರೋಣ ಎಂದು ಹೇಳಿ ಪರಸ್ಪರ ಹಂಚಿಕೊಂಡು ಆನಂದದಿಂದ ಭಾವೈಕ್ಯತೆಯಿಂದ ಹೋಗುತ್ತಿದ್ದರು. ಆಗ ಎಲ್ಲವರೂ ಪರಸ್ಪರ ಶುಭೇಚ್ಛೆ ಪಡೆಯುತ್ತಿದ್ದರು. ಇದು ಭಾರತೀಯರ ಭಾವೈಕ್ಯತೆಯ ಮತ್ತು ಮಾನವತೆಯ ಉಚ್ಚ ಸಂಸ್ಕೃತಿಯನ್ನು ಎತ್ತಿ ಹಿಡಿಯುತ್ತದೆ. ಮನೆ ಬಾಗಿಲಿಗೆ ಆರತಿ ಬೆಳಗಿ ಬರಮಾಡಿಕೊಂಡು ಉಪಹಾರ ಕೊಡುವ ಪದ್ಧತಿಯು ಕೆಲವರಲ್ಲಿ ನೆಲೆಸಿದೆ. ಆಗ ಮನೆಯಲ್ಲಿಯ ಒಟ್ಟು ವಾತಾವರಣವು ಉತ್ಸಾಹ ಸಂತೋಷ ನೆಮ್ಮದಿ ಸ್ನೇಹಮಯ ಆಗಿರುತ್ತದೆ.

ದಸರೆಯ ದಿನದಂದು ಬನ್ನಿ ಎಲೆಯ ಪೂಜೆ ನಡೆಯುತ್ತದೆ. ಬನ್ನಿ ಎಲೆಯ ಆಕಾರವು ಕಿಂಚಿತ್ ಹೃದಯದ ಪ್ರತೀಕಾತ್ಮಕ ಆಕಾರದಂತಿರುತ್ತದೆ. ಈ ಎಲೆಗಳನ್ನು ಪರಸ್ಪರ ಹಂಚುವುದರಿಂದ ಸ್ನೇಹ ಅಪೇಕ್ಷೆ ವರ್ಧಿಸದಂತೆ ಆಗುತ್ತದೆ.

ಮೈಸೂರಿನ ನವರಾತ್ರ್ಯೋತ್ಸವ ಮತ್ತು ದಸರಾ ಉತ್ಸವ - ಇವು ವಿನಮ್ರತೆಗಳಿಂದ ಸಜ್ಜುಗೊಳಿಸಲ್ಪಟ್ಟ ಭವ್ಯ ಉತ್ಸವವಾದರೂ ಅದೊಂದು ಜನಸಾಮಾನ್ಯರ ಉತ್ಸವವಾಗಿದೆ. ರಾಜ ಮಹಾರಾಜರು ಮತ್ತು ಪ್ರತಿಷ್ಠಿತರು ಈ ಉತ್ಸವಕ್ಕೆ ಬಂದು ವಿಶೇಷ ವೈಭವವನ್ನು ಮಾಡಿಕೊಟ್ಟರು. ಅಬಾಲ ವೃದ್ಧರೆಲ್ಲರೂ ಒಂದಾಗಿ ಈ ಉತ್ಸವದಲ್ಲಿ ಪಾಲ್ಗೊಳ್ಳುವರು.

ಕಾವೇರಿಯ ಮಡಿಲಲ್ಲಿರುವ 8 ಜಿಲ್ಲೆಗಳಲ್ಲಿ ದಸರೆ ಹಬ್ಬವನ್ನು ವಿಶೇಷ ಪರಂಪರೆ ಮತ್ತು ಉತ್ಸಾಹದಿಂದ ಆಚರಿಸುತ್ತಾರೆ. ಈ ಭಾಗದ ಪ್ರತಿಯೊಂದು ಮನೆಯಲ್ಲಿ ಗೊಂಬೆಗಳನ್ನು ಸ್ವಚ್ಛಗೊಳಿಸಿ ಸಜ್ಜುಗೊಳಿಸಲಾಗಿದೆ. ನವ ರಾತ್ರಿಯ ಮೊದಲ ದಿನದಂದು ಗೊಂಬೆಗಳನ್ನು ಅಡಿಸುತ್ತಾರೆ. ಗೊಂಬೆಗಳಲ್ಲಿ ರಾಜ ರಾಣಿಯರ ಜೋಡಿಯಿರುತ್ತವೆ. ಅವರ ಪಕ್ಕದಲ್ಲಿ ರಾಜ ಕನ್ಯೆ ಮತ್ತು ರಾಜ ಪುತ್ರಿ ಇರುತ್ತಾರೆ. ವಿಜಯನಗರ ರಾಜರ ಅರಮನೆಯ ಬಗ್ಗೆ ಈ ಗೊಂಬೆಗಳ ಐತಿಹಾಸಿಕ ನೆನಪು ತರುವಂತಹದ್ದಾಗಿರುತ್ತದೆ. ಈ

ಗೊಂಬೆಗಳ ಜತೆಗೆ ಎಲೆಗಳಿಂದ ಶೃಂಗರಿಸಲ್ಪಟ್ಟ ಮಂಗಲ ಕಾಲವೂ ಕೂಡ ಇರುತ್ತದೆ. ಪ್ರತಿಯೊಂದು ಮನೆಯಲ್ಲಿ ಈ ಪುರಾತನ ವಿವಿಧ ಸ್ವರೂಪಗಳ ಗೊಂಬೆಗಳನ್ನು ಮಾಡಿಸುತ್ತಾರೆ. ಮತ್ತು ಎರಡನೆಯ ದಿನದಿಂದ ಪ್ರತಿಯೊಂದು ಮನೆಯವರೂ ಇನ್ನೊಬ್ಬರ ಮನೆಗೆ ಹೋಗಿ ಅದನ್ನು ನೋಡಿ ಬರುತ್ತಾರೆ. ವಿಶೇಷವಾಗಿ ಚಿಕ್ಕಮಕ್ಕಳಿಗೆ ಆನಂದದ ಹಬ್ಬವಿರುತ್ತದೆ. ಬೊಂಬೆಗಳ ಮುಂದೆ ಕೋಲಾಟವಾಡುತ್ತಾರೆ. ಅವರಿಗೆ ಬೊಂಬೆ ಬಾಗಿನ ಕೊಡುವುದೂ ಉಂಟು.

ಕರ್ನಾಟಕದಲ್ಲಿ ವಿಜಯನಗರದ ಸಾಮ್ರಾಜ್ಯದ ಕಾಲಾವಧಿಯಲ್ಲಿ ನವರಾತ್ರಿಯ ಉತ್ಸವಕ್ಕೆ ನೈಜ ಅರ್ಥದಲ್ಲಿ ಮಹತ್ವ ಮತ್ತು ರಾಜವೈಭವ ಪ್ರಾಪ್ತವಾಗಿದೆ. ಈ ಕಾಲದಲ್ಲಿ ವಿಜಯನಗರದ ಸಾಮ್ರಾಜ್ಯರು ನಿಶ್ಚಿತ ಕಥೆ ಗಾಯನ ಸಂಗೀತಕಾರ ಧನುರ್ಧಾರಿ ಕುಸ್ತಿಪಟು ಇವರುಗಳು ದರಬಾರದಲ್ಲಿ ಸೇರುತ್ತಿದ್ದರು. ಇವರೆಲ್ಲರ ಭವ್ಯ ಸತ್ಕಾರ ಮಾಡಲಾಗುತ್ತಿತ್ತು. ಈ ಕಲಾವಿದರು ತಮ್ಮ ಕಲೆಯನ್ನು ಸಾದರ ಗೊಳಿಸಿದಾಗ ಜನರಿಗಾದ ಆನಂದ ಅಷ್ಟಿಷ್ಟಲ್ಲ. ಗ್ರೀಸದಲ್ಲಿಯ ಹಳೆಯ ಕಾಲದಲ್ಲಿಯ ಒಲಂಪಿಕ್ ಸ್ಪರ್ಧೆಯ ನೆನಪನ್ನುಈ ಉತ್ಸವವು ಮಾಡುತ್ತದೆ. ಕಲಾಕಾರರಿಗೆ ತಮ್ಮ ಕಲೆಯನ್ನು ಸಾದರ ಗೊಳಿಸಲು ಮಹಾನವಮಿ ಹಬ್ಬವು ಒಂದು ಸಾಧನವಾಗಿದೆ.

ಕೃಷ್ಣದೇವರಾಯ ಮೊದಲಾದ ವಿಜಯ ನಗರ ರಾಜ ಮನೆತನದ ನಂತರ ಈ ಉತ್ಸವದ ಸಾಂಸ್ಕೃತಿಕ ಪರಂಪರೆಯನ್ನು ರಕ್ಷಿಸುವವರ ಕೆಲಸವನ್ನು ಪಡೆದ ಒಡೆಯರ ಮನೆತನದವರು 17 ನೆಯ ಶತಮಾನದಲ್ಲಿ ಈ ಉತ್ಸವವನ್ನು ತಮ್ಮ ರಾಜಧಾನಿ ಶ್ರೀರಂಗಪಟ್ಟಣದಲ್ಲಿ ಆರಂಭಿಸಿದರು. ಮೈಸೂರು ನಗರ ನಿರ್ಮಾಣದ ನಂತರ ಈ ಉತ್ಸವವನ್ನು ಮೈಸೂರಿಗೆ ತಂದರು. ದೇಶದ ಉದ್ದಗಲದಿಂದ ಅಷ್ಟೇ ಅಲ್ಲದೇ ಬ್ರಿಟನ್, ಜರ್ಮನ್, ಫ್ರಾನ್ಸ್, ಅಮೇರಿಕಾದವರು - ಈ ಉತ್ಸವಕ್ಕೆ ಜನ ಬರುತ್ತಿದ್ದರು.

**ಮಡಿಕೇರಿ ದಶರಾ**

ಮಡಿಕೇಯಲ್ಲಿ ಆಚರಿಸುವ ದಸರೆ ಹಬ್ಬಕ್ಕೆ ನೂರಾರು ವರ್ಷಗಳ ಇತಿಹಾಸವಿರುತ್ತದೆ. ಮೈಸೂರು ದಸರಾ ದೇಶದಲ್ಲಿಯೇ ಪ್ರಸಿದ್ಧವಾಗಿದೆ. ಜಗಮಗಿಸುವ ವಿದ್ಯುತ್ ದೀಪಗಳಿಂದ ಅಲಂಕರಿಸಿ ಮಾಡುವ ಈ ಹಬ್ಬದಲ್ಲಿ ದೇವದೇವತೆಗಳ ಸ್ತಬ್ದ ಮೂರ್ತಿಗಳನ್ನು ನೋಡುವುದೇ ಒಂದು ಸುಖ ಅನುಭವವಾಗಿದೆ.

ದೊಡ್ಡ ವೀರರಾಜೇಂದ್ರನು ಕೊಡಗನ್ನು ಆಳುತ್ತಿದ್ದಾಗ ಈ ನವರಾತ್ರ್ಯೋತ್ಸವವನ್ನು ಹೆಚ್ಚಗಿನ ಉತ್ಸಾಹದಲ್ಲಿ ಆಚರಿಸುತ್ತಿದ್ದನು. ಸೇನೆಯಲ್ಲಿಯ ಆನೆ ಕುದುರೆಗಳನ್ನು ಸುಶೋಭಿತಗೊಳಿಸಿ ರಾಜಗೃಹದ ಪಟಾಂಗಣ ದಲ್ಲಿ ನಿಲ್ಲಿಸ ಲಾಗುತ್ತದೆ. ಆಮೇಲೆ ಅಲ್ಲಿ ಪಾಲ್ಗೊಳ್ಳಲು ತಮ್ಮ ಸಂಪ್ರದಾಯದಂತೆ ಪೋಷಾಕು ಒಡವೆ ಮತ್ತು ಆಯುಧಗಳನ್ನು ಕೊಂಡು ಬರುತ್ತಾರೆ. ಅದೇ ಮನೆ ದರಬಾರದಲ್ಲಿ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮವಾದ ನಂತರ ಆನೆಯ ಮೇಲೆ ಅಂಬಾರಿ ಏರುತ್ತಾರೆ. ಮತ್ತು ಇನ್ನೊಂದು ಆನೆಯ ಮೇಲೆ ರಾಜರು ವಿರಾಜಮಾನರಾಗಿ ಮಡಿಕೇರಿಯ ಮುಖ್ಯ ರಸ್ತೆಯ ತುಂಬಾ ಮೆರವಣಿಗೆ ಮಾಡಿ ಕೊನೆಗೆ ಸೀಮೊಲ್ಲಂಘನವನ್ನು ಉತ್ಸವಾಂಗವಾಗಿ ಮಾಡುತ್ತಾರೆ.

ಮೊದಲಿನಿಂದ ದೊಡ್ಡ ಉತ್ಸಾಹದಿಂದ ಆಚರಿಸುವ ದಸರೋತ್ಸವಕ್ಕೆ ನವಚೈತನ್ಯ ಕೊಡುವ ಸಲುವಾಗಿ 1964 ರಂದು ವಿವಿಧ ದೇವಸ್ಥಾನದ ಪ್ರತಿನಿಧಿಗಳು ಮತ್ತು ಮಡಿಕೇರಿಯ ಮಹಾಪೌರರೊಡಗೂಡಿ ದಸರಾ ಉತ್ಸವ ಸಮಿತಿ ರಚಿಸಲ್ಪಟ್ಟಿತು. ಈ ಸಮಿತಿಯು ದಸರೆಯಲ್ಲಿ ವೈಭವದಿಂದ ಆಚರಿಸುವ ಹೊಣೆಯನ್ನು ಹೊತ್ತುಕೊಂಡಿದೆ. 1987 ರಂದು ಮಂಟಪ ಸಮಿತಿಯು ಕರಗ ದೇವಾಲಯಗಳು ನಗರ ದೇವರ ಮತ್ತು ನಗರದ ಕೆಲ ಪ್ರಮುಖರ ಈ ಸಮಾವೇಶದಿಂದ ಇನ್ನೊಂದು ಸಮಿತಿ ಹುಟ್ಟಿಕೊಂಡಿತು. ಈ ಉತ್ಸವದಲ್ಲಿ ಜಾತಿ ಧರ್ಮಗಳ ಭೇದಭಾವ ಮನ್ನಿಸದೆ ಸರ್ವ ಜನಾಂಗ ಧರ್ಮದ ಜನರು ಪಾಲ್ಗೊಳ್ಳುತ್ತಿದ್ದರು.

ಮಹಾಲಯ ಅಮಾವಾಸ್ಯೆಯ ಮರುದಿನ ದಿಂದ ಮಡಿಕೇರಿಯ ಮಂದಿರದದಲ್ಲಿ ವಿಶೇಷ ಪೂಜಾರ್ಚನೆಗಳು ಆರಂಭವಾಗುತ್ತವೆ. ಶ್ರೀಕಾಂತ ಕಾಮಾಕ್ಷಿ, ಶ್ರೀ ಕೋಟಿ ಮರಿಯಮ್ಮಾ, ಶ್ರೀ ಕುಂದೂರು ಮರಿಯಮ್ಮ, ದಂಡಿನ ಮರಿಯಮ್ಮ, ಈ ಮಂದಿರದಲ್ಲಿ ನವರಾತ್ರಿಯ ಕರಗ ಆರಾಧನೆಗೆ ಪ್ರಾರಂಭ ವಾಗುತ್ತದೆ. ಮಹಾರಾಜರ ಕಾಲದಿಂದ ನಡೆದು ಬಂದಿರುವ ಕರಗದ ಮೆರವಣಿಗೆ ನಾಲ್ಕು ದಿಕ್ಕುಗಳಿಂದ ಹೊರಡುತ್ತದೆ. ಪ್ರತಿಪದೆಯಿಂದ ಪೂಜೆ ಸಲ್ಲಿಸುತ್ತಾರೆ. ನರ್ತನ ಕೂಡ ನಡೆಯುತ್ತದೆ.

ದಸರಾ ಸಮಿತಿಯ ಆಶ್ರಯದಲ್ಲಿ ಕ್ರೀಡಾಳುಗಳಿಗೆ ಪ್ರೋತ್ಸಾಹ ಕೊಡುವ ಸಲುವಾಗಿ ದಸರಾ ಕ್ರೀಡಾ ಸ್ಪರ್ಧೆಯನ್ನು ಆಯೋಜಿಸ ಲಾಗಿದೆ. ಕವಿಗಳಿಗೆ ಪ್ರೋತ್ಸಾಹ ಸಲು ದಸರಾ ಕವಿಗೋಷ್ಠಿ ಏರ್ಪಾಟು ಆಗುತ್ತದೆ.

ದಸರೆಯು ರಾತ್ರಿಯ ಕಾಲಕ್ಕೆ ಬೇರೆ ಬೇರೆ ರೀತಿಯಿಂದ ವಿದ್ಯುದೀಪಗಳಿಂದ ಸಜ್ಜು ಗೊಳ್ಳುತ್ತದೆ. ಆಯುಧ ಪೂಜೆಯ ದಿನ ಮತ್ತು ದಸರೆ ದಿನದಂದು ರಾತ್ರಿಗೆ ವಿಶೇಷವಾಗಿ ರೀತಿಯಲ್ಲಿ ಸಜ್ಜುಗೊಳಿಸುವಲ್ಲಿ ವಾಹನಗಳು ಕಂಗಳಿಗೆ ಸುಖಕರ ಅನುಭವ ನೀಡುತ್ತದೆ ಉತ್ತಮ ಮಂಟಪ ಶೃಂಗಾರಕ್ಕೆ ಬಹುಮಾನ ಕೊಡುವರು.

ಈ ದಶಹರೋತ್ಸವದ ನಿಮಿತ್ತ ಮಡಿಕೇರಿಯಲ್ಲಿಯ ದೇವಾಲಯಗಳು ಕಾವೇರಿ ಕಲಾಕ್ಷೇತ್ರ, ಅರಮನೆಯ ಪ್ರವೇಶದ್ವಾರ ಅಂಗಡಿ ಮುಗ್ಗಟ್ಟಗಳು ವಿದ್ಯುದೀಪಗಳಿಂದ ಅಲಂಕರಿಸುತ್ತಾರೆ.

ಕರ್ನಾಟಕ ರಾಜ್ಯ ಸರಕಾರವು ದಸರಾ ಉತ್ಸವಕ್ಕಾಗಿ ಧನ ಸಹಾಯ ಮಾಡುತ್ತಿದ್ದು ಜನರ ಹಬ್ಬ ಎಂದು ಆಚರಣೆ ಗೊಳ್ಳುತ್ತದೆ. ಈ ಹತ್ತು ದಿನದ ಕಾಲಾವಧಿಯಲ್ಲಿ 40-50 ಸಹಸ್ರ ಮಡಿಕೇರಿ ಜನರು ದೈನಂದಿನ ಕಾರ್ಯಕ್ರಮ ಬಿಟ್ಟು ಈ ಉತ್ಸವದ ಆನಂದಕ್ಕಾಗಿ ಹೆಣಗಾಡಿ ಕಾರ್ಯಗೈದು ಸಂತಸ ಪಡೆಯುವರು.

ಹೀಗೆ ದಸರಾ ಹಬ್ಬವು ಒಂದೊಂದು ಊರಿನಲ್ಲಿ ತನ್ನದೇ ಆದ ವೈಶಿಷ್ಟತೆಯಿಂದ ಪ್ರಸಿದ್ಧವಾಗಿದೆ. ಶ್ರೀ ಆದಿಶಕ್ತಿಗೆ ಇದೋ ನಮನಗಳು.

ನಮಸ್ತೇ ದೇವ ದೇವೇಶಿ,
ನಮಸ್ತೆ ವಿಶ್ವಭಾಮಿನಿ ।
ನಮಸ್ತೆಮಹಿಷಾರೂಢೇ
ದುರ್ಗಾದೇವ್ಯೈ ನಮೋ ನಮಃ ॥

★★★★★

# ಸರಸ್ವತಿ ನದೀ ವಿಚಾರ

ಭಾರತದ ಪ್ರಾಚೀನ ಸಭ್ಯತೆ ಹಾಗೂ ಸಂಸ್ಕೃತಿಯ ಸಂಪತ್ತು 'ಸರಸ್ವತಿ ನದಿ'. ಇದನ್ನು ನದಿಗಳಲ್ಲೆಲ್ಲಾ ಉತ್ತಮ ನದಿಯೆಂದು ಋಗ್ವೇದದಲ್ಲಿ ಪರಿಗಣಿಸಲಾಗಿದೆ. ಆದರೆ ಈಗ ಈ ನದಿಯು ಲುಪ್ತವಾಗಿದೆ. ಉಪಗ್ರಹ ಹಾಗೂ ವೈಜ್ಞಾನಿಕ ವಿಧಾನಗಳಿಂದ ಅದರ ಭೂಗರ್ಭೀಯ ಅಸ್ತಿತ್ವವನ್ನು ಪರಿಗಣಿಸಲಾಗಿದೆ. ಗಂಗಾ, ಯಮುನಾ ನದಿಗಳಂತೆ ಈ ನದಿಯು ಹಿಮಾಲಯದ 'ಗ್ಲೇಶಿಯರ್' ನಿಂದ ಹೊರಡುವ ಹಿಮನದಿ. ಆದ್ದರಿಂದ ಹಿಮಾಲಯ ಇರುವವರೆಗೆ ಈ ನದಿಯಲ್ಲಿ ನೀರು ಇರುತ್ತದೆ. ಈಗ ಈ ನದಿ ಭೂಮಿಗಿಳಿದು ಹೋಗಿದೆ. ಇದರಿಂದ ಪ್ರವಾಹ ಮಾರ್ಗದಲ್ಲಿರುವ ಹರಿಯಾಣ, ಪಂಜಾಬ್, ರಾಜಾಸ್ಥಾನ್ ಮುಂತಾದ ಪ್ರದೇಶಗಳು ಜಲಭರಿತವಾಗುತ್ತವೆ.

ಭಾರತದ ಪ್ರಾಚೀನ ಇತಿಹಾಸ, ಸಭ್ಯತೆ ಹಾಗೂ ಸಂಸ್ಕೃತಿಗೆ ಈ ನದಿಯು ಪ್ರಖ್ಯಾತವಾಗಿತ್ತು. ವೇದಕಾಲದಲ್ಲಿ ಹಿಮಾಲಯ ಪರ್ವತ ಶ್ರೇಣಿಗಳಿಂದ ಅವತರಿಸಿರುವ ಹಾಗೂ 1600 ಕಿ.ಮೀ. ಪ್ರವಾಹ ಮಾರ್ಗದಲ್ಲಿ ಈ ನದಿಯು ಮೇಲೆ ಹೇಳಿರುವ ಪ್ರದೇಶಗಳಲ್ಲಿ ಹರಿಯುತ್ತಾ ಕೊನೆಯಲ್ಲಿ ಗುಜರಾತಿನ 'ಸೋಮನಾಥ' ಬಳಿ ಇರುವ 'ಪ್ರಭಾಸ ಪಾಠಣ'ದಲ್ಲಿ ಹಿಂದೂ ಸಾಗರವನ್ನು ಸೇರುತ್ತಿತ್ತು. ಭಾರತದ ಪ್ರಾಚೀನ ಸಂಸ್ಕೃತಿಯ ವಿಕಾಸ ಈ ನದಿಯ ದಡದಲ್ಲಿದೆ.

ಕಳೆದ 30 ವರ್ಷಗಳ ಭೂಗರ್ಭ ಸರ್ವೇಕ್ಷಣೆಯಿಂದ 85 ನಗರೀಯ ಅವಶೇಷಗಳು ದೊರಕಿವೆ. ನದಿಯಲ್ಲಿ ಒಟ್ಟು 1600 ಅವಶೇಷಗಳು ದೊರಕಿವೆ. ಗುಜರಾತ್‌ನ ಸಪರ್, ಗರಹಿ, ಕುವಾಲ್, ಕನಾವಾಲಿ, ಧೋಲಾವೀರ್, ಲೋಥಲ್, ಬೇಟ್ ದ್ವಾರಿಕಾ ಮುಂತಾದ ಸ್ಥಳಗಳಲ್ಲಿ ಸಭ್ಯತೆಯ ಗುರುತುಗಳಾಗಿ ವಸ್ತ್ರಗಳು ಹಾಗೂ ಆಭರಣಗಳ 450 ಅವಶೇಷಗಳು ದೊರಕಿವೆ.

ಶಾಸ್ತ್ರಗಳಲ್ಲಿ ಸರಸ್ವತಿ ನದಿಯನ್ನು 'ಸಪ್ತಸಿಂಧುಪ್ರದೇಶದೇವಿ' ಎಂದು ಹೇಳಲಾಗಿದೆ. ಈ ನದಿಯ ದಡದಲ್ಲೇ ಪ್ರಚೀನ ಗ್ರಂಥವಾದ 'ಋಗ್ವೇದ'ದ ರಚನೆಯಾಯಿತೆನ್ನುವುದು ನಿರ್ವಿವಾದವಾದ ಸತ್ಯ.

ಈ ಸರಸ್ವತಿ ನದಿ ಹೇಗಿತ್ತು? ಇದು ಯಾವ ಯಾವ ಪ್ರದೇಶಗಳಲ್ಲಿ ಹರಿಯುತ್ತಿತ್ತು? ಇದರ ಸಂಸ್ಕೃತಿ ಹಾಗೂ ಸಭ್ಯತೆ ಹೇಗಿತ್ತು? ಆಗ ಸಮಾಜವು ಹೇಗಿತ್ತು? ನದಿಯು ಯಾಕೆ ಬತ್ತಿ ಹೋಯಿತು? ಪುನಃ ಹರಿಯುವಂತೆ ಮಾಡುವ ಬಗೆ ಹೇಗೆ? ಎಂಬ ನಾನಾ ಪ್ರಶ್ನೆಗಳು ಮನಸ್ಸಿನಲ್ಲಿ ಹುಟ್ಟುತ್ತವೆ.

1974 ರಲ್ಲಿ ಪದ್ಮಶ್ರೀ ದಿವಂಗತ ಶ್ರೀ ವಿಷ್ಣು ಶ್ರೀಧರ್ ಪಾರ್ಕಣಿಕರ್ ರವರ ಪ್ರೇರಣೆಯಿಂದ



'ಸರಸ್ವತಿ ನದಿಯ ಶೋಧ' ಎಂಬ ಕಾರ್ಯಾಗಾರವು ಆರಂಭವಾಯಿತು. 'ವೈದಿಕ ಸರಸ್ವತಿ' ನದಿಯ ಶೋಧ ಸಂಸ್ಥಾನವನ್ನು ಸ್ಥಾಪಿಸಿದರು. ಈ ಸಂಸ್ಥೆಯು ಮೋರೋಪಂತ ಪಿಂಗಳೆಯವರ ನೇತೃತ್ವ ಹಾಗೂ ಮಾರ್ಗದರ್ಶನದಲ್ಲಿ 'ಸರಸ್ವತಿ'ಗೆ ಜೀವಂತಿಕೆ ಕೊಡುವುದರಲ್ಲಿ ತೊಡಗಿದೆ. 1600 ಕಿ.ಮೀ. ಮಾರ್ಗದಲ್ಲಿ ನೀರನ್ನು ಹರಿಸುವ ಅದ್ಭುತ ಸಂಕಲ್ಪವನ್ನು ಹೊಂದಿದೆ. ಈ ಸಂಕಲ್ಪದ ನಿರ್ದೇಶಕರಾದ ಎಸ್. ಕಲ್ಯಾಣರಾಮನ್‌ರವರು 'ಸರಸ್ವತಿ' ಎಂಬ ಪುಸ್ತಕವನ್ನು ಬರೆದಿದ್ದಾರೆ. ಮೂರು ಭಾಗಗಳಲ್ಲಿ ಪ್ರಕಾಶಿತಗೊಂಡಿರುವ ಈ 'ಎನ್‌ಸೈಕ್ಲೋಪೀಡಿಯಾ'ದಲ್ಲಿ ಈ ನದಿಯ ಸಂಸ್ಕೃತಿ ಹಾಗೂ ಸಭ್ಯತೆ ಹಾಗೂ ಇದನ್ನು ಜೀವಂತವನ್ನಾಗಿ ಮಾಡುವ ವಿಧಾನಗಳೆಲ್ಲಾ ವರ್ಣಿತವಾಗಿವೆ.

ಭಾರತದ ಮೇಲೆ ಆರ್ಯರ ಆಕ್ರಮಣದ ಸಿದ್ಧಾಂತವನ್ನು ಖಂಡಿಸುತ್ತಾ, ಸರಸ್ವತಿ ನದಿಯ ದಡದಲ್ಲಿ ಮೂಲ ಭಾರತೀಯರು ವಾಸವಾಗಿದ್ದರು ಎಂದು ಲೇಖಕರು ಪ್ರತಿಪಾದಿಸಿದ್ದಾರೆ. ಅವರು ವಿಶ್ವದ ವಿಭಿನ್ನ ಕ್ಷೇತ್ರಗಳಿಗೆ ಹೋಗಿ ಭಾರತದ ಸಂಸ್ಕೃತಿಯ ಬಾವುಟವನ್ನು ಹಾರಿಸಿದವರು.

3000 ವರ್ಷಗಳ ಮೊದಲೇ ಈ ನದಿಯು ಅಸ್ತಿತ್ವದಲ್ಲಿತ್ತು ಹಾಗೂ 1500 ವರ್ಷಗಳ ಹಿಂದೆ ಇದು ಒಣಗಿ ಹೋಯಿತೆಂದು ಇತಿಹಾಸದಿಂದ ಅರಿವಾಗುತ್ತದೆ. ನದಿ ಒಣಗಿ ಹೋಗಿರುವುದಕ್ಕೆ ಡಾ|| ಕಲ್ಯಾಣರಾಮನ್‌ರವರು ಮೂರು ಕಾರಣಗಳನ್ನು ತಿಳಿಸುತ್ತಾರೆ. 1) ಸರಸ್ವತಿಯ ಸಹಾಯಕ ನದಿ ಯಮುನೆಯ ಪ್ರವಾಹ ಹಿಮಾಲಯದಲ್ಲಿ 'ಪಾರವಟಾ ಸಾಹಿಬ್' (ಸಿಖ್ಖರ ಧರ್ಮಸ್ಥಾನ) ಮುಂದೆ ಪೂರ್ವ ದಿಕ್ಕಿನ ಕಡೆ ಹೋಯಿತು. 2) ಸರಸ್ವತಿಯ ಉಪಶಾಖಾನದಿಯಾದ ಸಟ್ಲೆಜ್ ಕೈಲಾಸ ಮಾನಸ ಸರೋವರದಿಂದ ಹೊರಡುತ್ತಿತ್ತು. ಭೂಮಿಯಲ್ಲಿ ಬದಲಾವಣೆಗಳಾದವು. ಆದರಿಂದ ಬೇರ್ಪಡೆಯಾದ, ಪಂಜಾಬ್‌ದ ಶತದ್ರು ನದಿಯ ಜೊತೆ ಸೇರಿ 'ರೋಪರ್' ಎಂಬ ಸ್ಥಳದಲ್ಲಿ ತಿರುಗಿ ಮುಂದೆ ಹರಿಯುತ್ತಾ ಸಿಂಧೂ ನದಿಗೆ ಸೇರಿತು. 3) ಭಾರೀ ಬಿರುಗಾಳಿಯ ಪ್ರಭಾವದಿಂದ, ಪ್ರವಾಹಿತ ಪ್ರದೇಶಗಳಲ್ಲೆಲ್ಲಾ ಮರಳಿನ ಗುಡ್ಡೆಗಳು ಮೈಲಿಗಳವರೆಗೆ ಕಾಣುವಂತಾಯಿತು. (ಇದನ್ನು ಈಗಲೂ ಸಹ

ಆದ್ಯರಾಮಾಚಾರ್ಯ

ರಾಜಾಸ್ಥಾನದ ಮರುಭೂಮಿಯಲ್ಲಿ ನೋಡ ಬಹುದು) ನದಿಯು ಒಣಗಿ ಹೋದ ಕಾರಣ ಅಲ್ಲಿನ ನಿವಾಸಿಗಳು ಗಂಗಾ ಯಮುನಾ ಬಯಲು ಪ್ರದೇಶದಲ್ಲಿ ಬಂದು ಇರತೊಡಗಿದರು.

ಡಾ|| ಕಲ್ಯಾಣರಾಮನ್ ರವರ ಪ್ರಕಾರ, ರಕ್ಷಾ ಪ್ರಯೋಗಶಾಲೆ, ಮುಂಬೈ ಭಾಬಾ ಅಟಾಮಿಕ್ ರಿಸರ್ಚ್ ಸೆಂಟರ್, ಜೋಧಪುರ್, ಫ್ರಾನ್ಸ್, ಜರ್ಮನಿ ಹಾಗೂ ಇಟಲಿಯ ವಿಜ್ಞಾನಿಗಳು ನದಿಯನ್ನು ಪುನಃ ಜೀವಂತವನ್ನಾಗಿ ಮಾಡುವ ಕಾರ್ಯದಲ್ಲಿ ತೊಡಗಿದ್ದಾರೆ.

ಇನ್ನೂ ಅನೇಕ ನದಿಗಳು ಒಣಗಿ ಹೋಗಿರುವಾಗ 'ಸರಸ್ವತಿ' ನದಿಯನ್ನೇ ಯಾಕೆ ಜೀವಂತ ಮಾಡುವ ಪ್ರಯಾಸದಲ್ಲಿ ತೊಡಗಿದ್ದಾರೆ ಎಂಬ ಪ್ರಶ್ನೆ ಉದ್ಭವವಾಗುತ್ತದೆ. ಪ್ರಾಜೆಕ್ಟ್ ಸಂಪೂರ್ಣವಾದ ಮೇಲೆ ರಾಜಾಸ್ಥಾನ್ ಹಾಗೂ ಗುಜರಾತ್‌ನ ನೀರಿನ ಸಮಸ್ಯೆ ನಿವಾರಣೆಯಾಗಬಹುದು. 17 ವರ್ಷಗಳ ಸತತ ಅಧ್ಯಯನ ಹಾಗೂ ಪರಿಶ್ರಮದ ನಂತರ, ಈ ಸಂಕಲ್ಪ ಕೈಗೊಂಡಿರುವುದು ನಮ್ಮ ಆತ್ಮಗೌರವದ ಪ್ರತೀಕವೆಂದು ಹೇಳಬಹುದು, ಇದು ಡಾ|| ಕಲ್ಯಾಣರಾಮನ್ ರವರ ಅಭಿಪ್ರಾಯ.

ಮೊದಲನೆಯದಾಗಿ, ಹಿಮಾಲಯದಿಂದ ಪೂಹೆಯಾವರೆಗೆ, ನದಿಯು ಸದಾಕಾಲ ನೀರಿನಿಂದ ತುಂಬಿರುತ್ತದೆ. ಈ ಯೋನೆಗಾಗಿ ವಿಶ್ವಬ್ಯಾಂಕ್‌ನವರೂ ಸಹ 136 ದಶಲಕ್ಷ ಡಾಲರ್ ಹಣವನ್ನು ನೀಡಿದ್ದಾರೆ.

ಈ ಸಂಕಲ್ಪ ಪೂರ್ಣವಾದ ಮೇಲೆ ಪಂಜಾಬ್, ರಾಜಾಸ್ಥಾನ, ಗುಜರಾತ್ ಹಾಗೂ ಕಛ್ ಪ್ರದೇಶಗಳಲ್ಲಿ ನೀರಿನ ಸಮಸ್ಯೆ ನಿವಾರಣೆಯಾಗುವುದು.

ನಮ್ಮ ದೇಶಕ್ಕೆ ನಿಸರ್ಗದ ಕೃಪೆ ಚೆನ್ನಾಗಿದೆಯೆಂದು ಡಾ|| ಕಲ್ಯಾಣರಾಮನ್ ಹೇಳುತ್ತಾರೆ. ಭೂಗರ್ಭದಲ್ಲಿ ನೀರಿನ ಅಂಶ ಅತ್ಯಧಿಕವಾಗಿದೆ. ಯೋಗ್ಯವಾದ ಆಯೋಜನೆ ಇಲ್ಲದ ಕಾರಣ ನಿಸರ್ಗವೂ ಸಹ ಕುಪಿತವಾಗಿದೆ. ಈ ಯೋಜನೆಯು ಸಫಲವಾದಲ್ಲಿ ಸಂಪೂರ್ಣ ದೇಶಕ್ಕೆ ಹತ್ತು ಸಾವಿರ ವರ್ಷಗಳವರೆಗೆ ಸಂತೃಪ್ತಿಯಾಗುವಷ್ಟು ನೀರು ದೊರೆಯುವುದು. ಈಗಿನಂತೆ ನೀರುಗಾಗಿ ಪರದಾಡುವುದು ತಪ್ಪುತ್ತದೆ.

ಭಾರತ ಸರ್ಕಾರದ 'ನ್ಯಾಷನಲ್ ವಾಟರ್ ಡೆವಲಪ್‌ಮೆಂಟ್ ಏಜನ್ಸಿ' 17 ವರ್ಷಗಳ ಸಂಶೋಧನೆಯ ನಂತರ 'ಸರಸ್ವತಿ'ಯನ್ನು ಜೀವಂತ ಮಾಡುವ ಕಾರ್ಯದ ಶುಭಾರಂಭವು ಇತ್ತೀಚೆಗೆ ಆಗಿದೆ. ವಸಂತ ಪಂಚಮಿಯನ್ನು 'ಸರಸ್ವತಿ' ನದಿಯ ಜನ್ಮದಿವಸವೆಂದು ಪರಿಗಣಿಸಲಾಗಿದೆ. ಗಂಗೆಯನ್ನು ಪೃಥ್ವಿಗೆ ತರುವುದಕ್ಕಾಗಿ ಒಬ್ಬ ಭಗೀರಥನು ಪ್ರಯತ್ನ ಮಾಡಿದನೆಂದು ಪುರಾಣಗಳು ತಿಳಿಸುತ್ತವೆ. ಆದರೆ ಈಗ ಸರಸ್ವತಿಯನ್ನು ಜೀವಂತ ಮಾಡುವುದಕ್ಕೆ ಒಂದು ಲಕ್ಷ ಭಗೀರಥ ಪ್ರಯತ್ನಗಳ ಅವಶ್ಯಕತೆಯಿದೆ. ಎಲ್ಲಾ ಸಾಕ್ಷಿಗಳ ಜೊತೆ ಆಯೋಜನೆಯನ್ನು ವಿಶ್ವದ ಮುಂದೆ ಇಡಲಾಗಿದೆ.

★★★★★


ಸಂದರ್ಶಿಸಿ ಆನಂದಿಸಿ

# ಶ್ರೀ ವೆಂಕಟೇಶ್ವರಸ್ವಾಮಿ ಆಲಯ

ತಿರುಮಲೆ

# ವಾರ್ಷಿಕ ಪುಷ್ಪಯಾಗ

**21-11-2001 - ಕಾರ್ತೀಕ ಶ್ರವಣ ನಕ್ಷತ್ರದ ದಿನ**

| | | |
|---|---|---|
| 20-11-2001 | ಮಂಗಳವಾರ | ಅಂಕುರಾರ್ಪಣೆ. |
| 21-11-2001 | ಬುಧವಾರ | ಪುಷ್ಪಯಾಗ. |

ಸೂಚನೆ : ಪುಷ್ಪಯಾಗದಲ್ಲಿ ಆರ್ಜಿತ ಶುಲ್ಕವನ್ನು ನೀಡಿ ಭಕ್ತರು ಭಾಗವಹಿಸಬಹುದು. ತಮ್ಮ ಬಳಿಯ ಸಮಾಚಾರ ಕೇಂದ್ರದಲ್ಲಿ ವಿಚಾರಿಸಿ.

ನೀವೂ ಬನ್ನಿ. ತಿ.ತಿ.ದೇ. ನಿಮ್ಮವರನ್ನೂ ಕರೆತನ್ನಿ.

# ಪಾದಾಲ ಮಂಟಪದ ಮಟ್ಲಕುಮಾರ

- ಬಿ. ಎನ್. ಎಸ್.

ತಾತ್ವಿಕವಾಗಿ ಸ್ವಾಮಿಯನ್ನುಸೇರಲು ಸಾವಿರ ದಾರಿಗಳುಂಟಾದರೂ ತಿರುಮಲೆಯನ್ನು ಭೌತಿಕವಾಗಿ ಸೇರಲು ನಾಲ್ಕು ದಾರಿಗಳು ಮಾತ್ರವೇ. ತಿರುಪತಿಯ ಬಳಿಯ ಅಲಿಪಿರಿಯಿಂದಲೂ, ಚಂದ್ರಗಿರಿಯ ಸಮೀಪದ ಶ್ರೀವಾರಿ ಮೆಟ್ಟುವಿನಿಂದಲೂ, ಮಾಮಂಡೂರು ಕಡೆಯಿಂದಲೂ, ಕಡಪದ ರಾಜಂಪೇಟೆ ಕಡೆಯಿಂದಲೂ ತಿರುಮಲೆಯನ್ನು ಸೇರಬಹುದು. ಈಗ 21 ನೇ ಶತಮಾನದ ಆರಂಭಕಾಲದಲ್ಲಿ, ಮೊದಲಿನ ಎರಡು ಎಂದರೆ ಅಲಿಪಿರಿಯಿಂದಲೂ, ಶ್ರೀವಾರಿ ಮೆಟ್ಟುವಿ ನಿಂದಲೂ ಇರುವ ದಾರಿಗಳು ಅತಿ ಹೆಚ್ಚು ಬಳಕೆಯಲ್ಲಿವೆ. ಅಲಿಪಿರಿಯಿಂದ ತಿರುಮಲೆಗೆ ಎರಡು ವಾಹನ ರಸ್ತೆಗಳುಂಟು. ಅವೆರಡೂ 20 ನೇ ಶತಮಾನದಲ್ಲಿ ಉಂಟಾದವುಗಳು. ಅಲಿಪಿರಿಯಿಂದ ಬೆಟ್ಟಕ್ಕೆ ಇರುವ ಪಾದಚಾರಿಗಳ ಮಾರ್ಗವೂ ಚಂದ್ರಗಿರಿಯಿಂದ ಹೊರಡತಕ್ಕ ಶ್ರೀವಾರಿ ಮೆಟ್ಟು ದಾರಿಯೂ ಪ್ರಾಚೀನ ಕಾಲದಿಂದ ಬಳಕೆಯಲ್ಲಿವೆ.

ಮೊದ ಮೊದಲಿಗೆ ಕ್ರಿಸ್ತಶಕದಾರಂಭ ಕಾಲದಲ್ಲಿ ತಿರುಮಲೆಯ ಉಲ್ಲೇಖ ಸಾಹಿತ್ಯ ಕೃತಿಗಳಲ್ಲಿ ಮಾತ್ರವೇ ಕಂಡು ಬರುವ ಹೊತ್ತಿಗೆ ಈ ಪ್ರದೇಶವೆಲ್ಲ ದುರ್ಗಮವಾದ ಅರಣ್ಯದಿಂದ ಕೂಡಿದ್ದು, ಅತ್ಯಂತ ಕಾಳಜಿ - ತುರ್ತು ಇರುವವರಲ್ಲದೆ ಸಾಧಾರಣ ಜನರಿಗೆ ಪ್ರವೇಶ ದುಸ್ತರ ವಾಗಿತ್ತೆನ್ನಬೇಕು. ಆಚಾರ್ಯ ರಾಮಾನುಜರು ಗೋವಿಂದ ರಾಜಸ್ವಾಮಿಯನ್ನು ಪ್ರತಿಷ್ಠಾಪಿಸಿ, ಆಲಯದ ಸುತ್ತಲೂ ಗೋವಿಂದರಾಜ ಪಟ್ಟಣವನ್ನು ಎಬ್ಬಿಸುವ ಮೊದಲು, ತಿರುಮಲೆಗೆ ಹೋಗಲು ಹತ್ತಿರದ ತಿರುಚಾನೂರು, ಯಾತ್ರಿಕರ ಮೊದಲ ಬಿಡದಿಯಂತೆ ಸೌಲಭ್ಯವನ್ನು ಒದಗಿಸುತ್ತಿದ್ದಿತು ಎನ್ನಬೇಕು. ಮೇಲೇರಿ ಬೆಟ್ಟಕ್ಕೆ ಹೋಗಲಾರದ ಯಾತ್ರಿಕರು ಇಲ್ಲಿಯೇ ಇದ್ದಂತಹ ಸ್ವಾಮಿಯ ಪ್ರತಿಮೂರ್ತಿಯ ತಿರುವಿಳಂಕೋಯಿಲಿನಲ್ಲಿ ತಮ್ಮ ಸೇವೆಯನ್ನು ಸಲ್ಲಿಸಿ ಹಿಂದಿರುಗುತ್ತಿದ್ದರು. ಇಲ್ಲಿಂದ ಅಂದಿಗೆ ಇದ್ದಿರಬಹುದಾದ ಕೊತ್ತೂರು (ನಂತರ ಅಚ್ಯುತರಾಯನ ಪೆರುಮಾಳ್ ಕೋಯಿಲ್ ನೆಲೆಗೊಂಡ ಸ್ಥಳ - ತಿರುಪತಿಯ ಪೂರ್ವ ವಲಯಪ್ರದೇಶ) ಮೂಲಕ ಕಪಿಲತೀರ್ಥದ ಬಳಿ ಬೆಟ್ಟವನ್ನೇರುವ ದಾರಿಯನ್ನು ಕಂಡು ಕೊಂಡಂತೆ ತೋರುತ್ತದೆ.

ರಾಮಾನುಜಾಚಾರ್ಯರು ತಿರುಪತಿಗೆ ಆಗಮಿಸಿದ ಮೇಲೆ ಇಲ್ಲಿ ಗೋವಿಂದರಾಜ ಸ್ವಾಮಿ ಗುಡಿ ಉಂಟಾಗಿ ಸುತ್ತ ನಗರ ಬೆಳೆಯುತ್ತಿದ್ದಾಗ, ಅವರು ಪ್ರತಿದಿನವೂ ಅಲಿಪಿರಿಯ ಬಳಿಯಿದ್ದ ಹುಣಿಸೆ ಮರದಡಿಯಲ್ಲಿ ತಮ್ಮ ಸೋದರ ಮಾವನೂ, ಯಾಮುನಾ ಚಾರ್ಯರ ಶಿಷ್ಯರೂ ಆಗಿದ್ದ ಶ್ರೀಶೈಲ ಪೂರ್ಣರಲ್ಲಿ (ತಿರುಮಲನಂಬಿ) ರಾಮಾಯಣ ರಹಸ್ಯಾರ್ಥವನ್ನು ತಿಳಿದರು. ತಿರುಮಲನಂಬಿ ತಿರುಮಲೆಯ ಸ್ವಾಮಿಗೆ ದಿನವೂ ಪಾಪನಾಶಿನಿಯಿಂದ ಶುದ್ಧೋದಕವನ್ನು ತಂದುಕೊಡುವ ಕೈಂಕರ್ಯದಲ್ಲಿದ್ದವರು. ಅವರು ಬೆಟ್ಟದಿಂದ ಬಯಲಿಗಿಳಿದು ಬರುವಲ್ಲಿ ಬಳಸಿದ ಹಾದಿಯೇ ಇಂದು ನಾವು ಅಲಿಪಿರಿಯಿಂದ ಬೆಟ್ಟಕ್ಕೆ ಹತ್ತಿ ಹೋಗಲು ಬಳಸುವ ಮಾರ್ಗ ಎಂದು ಹೇಳುವರು. ಇಲ್ಲಿ ಮುಖ್ಯವೆಂದರೆ ಅಲಿಪಿರಿಯ ಬಳಿ ಬೆಟ್ಟಕ್ಕೆ ಹೋಗುವ ಒಂದು ದಾರಿ ರಾಮಾನುಜರ ಕಾಲಕ್ಕೇ ಇದ್ದಿತು ಎಂಬುದು. ಇಲ್ಲಿ ಒಂದು ಹುಣಿಸೆಯ ಮರವೂ ಇದೆ. ಇಲ್ಲಿಯೇ ಪಾದಾಲ ಮಂಟಪಮು ಎನ್ನುವ ಪಾದುಕಾಮಂಟಪವೂ ಇದೆ. ಈ ದಾರಿಯಲ್ಲಿ ಮೇಲೆ ಹೋಗುತ್ತಿದ್ದಂತೆ



ಒಳಗಡೆ ಗೋಪುರದ ಮುಂಭಾಗದಲ್ಲಿರುವುದು ಪಾದಾಲ ಮಂಟಪ.



ಅಲಿಪಿರಿಯ ಬಳಿಯ ಹಳೆಯ ಮೆಟ್ಟಿಲ ಹಾದಿ, ಇಪ್ಪತ್ತನೆಯ ಶತಮಾನದ ಆದಿಯಲ್ಲಿ ತೆಗೆದ ಚಿತ್ರ. ಇಲ್ಲಿ ಮಟ್ಲಕುಮಾರ ಅನಂತರಾಜ ಕಟ್ಟಿಸಿದ ಎರಡೂ ಗೋಪುರಗಳು ಕಾಣುತ್ತವೆ. ಈಗ ಇವೆರಡನ್ನೂ, ಮೆಟ್ಟಿಲುಗಳನ್ನೂ ಜೀರ್ಣೋದ್ಧಾರಗೊಳಿಸಲಾಗಿದೆ.

ಕುರುವರತಿ ನಂಬಿಯ ಕುಲಾಲಚಕ್ರ, ಮರದ ಬಡಿಗೆಗಳು - ಕುಂಬಾರನ ಕುಟುಂಬ ಚಿತ್ರಗಳಿರುವ ಒರಟು ಶಿಲಾವೇದಿಯೂ, ಶ್ರೀನಿವಾಸ ಆನೆಯನ್ನು ಸಂತೈಸುವ ಉಬ್ಬು ಶಿಲ್ಪದ ಬಂಡೆಯೂ ಉಂಟು.

ಸುತ್ತ ಮುತ್ತ ಇರುವಂತಹ ಬೆಟ್ಟದ ಬಂಡೆಗಳನ್ನೇ ಒಂದು ರೀತಿಯಲ್ಲಿ ಚಕ್ಕೆ ಎಬ್ಬಿಸಿ ಮೆಟ್ಟಿಲು ಮಾಡಿದ್ದಿರಬಹುದಾದ ಈ ದಾರಿಯ ಉಲ್ಲೇಖ ಮೊದಲಿಗೆ ಒಂದು ಶಾಸನದಲ್ಲಿ ಕಂಡುಬರುತ್ತದೆ. ತಿ.ತಿ.ದೇ. ಶಾಸನ ಸಂಪುಟಗಳಲ್ಲಿನ ಸಾಳುವ ನರಸಿಂಹನ ಕಾಲದ ಶಾಸನ ಇದು. 'ಸಾಳುವ ನರಸಿಂಹನು 1407 ನೇ ಶಕವರ್ಷದಲ್ಲಿ (ಕ್ರಿ.ಶ. 1485 ರಲ್ಲಿ)-

ಶೇಷಾದ್ರ್ಯಾರೋಹ ವೀಥ್ಯಾಂ ಕೃತ
ಶುಭಕರೀಂ ಶ್ರೀ ನೃಸಿಂಹಸ್ವಾಮಿ ಪ್ರತಿಷ್ಠಾಂ'

ಗ್ರಂಥ ಲಿಪಿಯಲ್ಲಿರುವ ಸ್ರಗ್ಧರಾ ವೃತ್ತದ ಸಂಸ್ಕೃತ ಪದ್ಯವಿದು. ಶೇಷಾದ್ರಿಯನ್ನು ಏರುವ ದಾರಿಯಲ್ಲಿ ಗುಂಡಕ್ಷಿತಿಪತಿಯ ಮಗ ಮಹಾ ಮಂಡಲೇಶ್ವರ ಸಾಳುವ ನರಸಿಂಹನು ಶ್ರೀ ನರಸಿಂಹ ಸ್ವಾಮಿಯ ವಿಗ್ರಹವನ್ನು ಪ್ರತಿಷ್ಠಾಪಿಸಿದನೆಂಬುದು ಶಾಸನದ ತಾತ್ಪರ್ಯ.

ಸಾಳುವ ನರಸಿಂಹನ ಸಮಕಾಲೀನರಾದ ಕವಿ ತಾಳ್ಳಪಾಕ ಅನ್ನಮಾಚಾರ್ಯರೂ ಅಲಿಪಿರಿಯಲ್ಲಿ ನರಸಿಂಹ ಸ್ವಾಮಿಯನ್ನು ಒಲ್ಲೈಸಿ ಬದುಕಬೇಕೆಂಬ ಕೀರ್ತನೆಯನ್ನು ಬರೆದಿದ್ದಾರೆ. ಇದಾದ ನಂತರದ ಶಕವರ್ಷ 1411 ರಲ್ಲಿನ (ಕ್ರಿ.ಶ. 1489) ಒಂದು ಶಾಸನ ಈ ಪಥದ ಬಗ್ಗೆ ಹೆಚ್ಚು ವಿವರಗಳನ್ನು ಬಿಟ್ಟುಕೊಡುತ್ತದೆ. ಅದರಂತೆ ಸಾಳುವ ನರಸಿಂಹರಾಯರ ಧರ್ಮವಾದ 'ಲಕ್ಷ್ಮೀ ನರಸಿಂಹಸ್ವಾಮಿ ಕೋಯಿಲ್ ಗೋಪುರತ್ತಕ್ಕುಂ ಪೆರಿಯ ತಿರುಗೋಪುರತ್ತುಕ್ಕುಂ ತೆನ್‌ಪುರತ್ತಿಲ್ ಉತ್ತರಮೇರೂರು ಕರವೆಟ್ಟಿ ಪುಲಿ ಆಳ್ವಾರ್ ಮನ್ನಾರ್ ಪಿಳ್ಳೈ ನಡೈವಾವಿ ಧರ್ಮಂ? ಈ ಮೆಟ್ಟಿಲ ಬಾವಿ (ನಡೆದು ಇಳಿಯುವ ಬಾವಿ) ಈಗಿರುವ ಪಾದಾಲ ಮಂಟಪಕ್ಕೆ ದಕ್ಷಿಣದಲ್ಲಿ ಎಂದರೆ ಅಲಿಪಿರಿಯ ''ಧರ್ಮೋ ರಕ್ಷತಿ ರಕ್ಷಿತಃ'' ಹುಲ್ಲು ಹಾಸಿನ ಹಿಂಭಾಗದಲ್ಲಿದೆ. ಇದು ಶಾಸನದಲ್ಲಿ ಹೇಳುವಂತೆ ಪೆರಿಯ ಗೋಪುರದ ದಕ್ಷಿಣಕ್ಕೆ ಇದೆ ಎಂಬುದು ಅದನ್ನೂ ಅದರ ಜೊತೆಗೆ ನರಸಿಂಹನ ಗುಡಿಯನ್ನೂ ಸಾಳುವ ನರಸಿಂಹನು ನಿರ್ಮಿಸಿರಬೇಕು ಎಂಬುದನ್ನೂ ತಿಳಿಸುತ್ತದೆ. ಇಲ್ಲಿನ ಪಾದಾಲ ಮಂಟಪ, ಅಲ್ಲಿಂದ ಮೇಲೇರುವುದಕ್ಕೆ ಕಲ್ಲುಹಾಸಿನ ಮೆಟ್ಟಿಲುಗಳು ಎರಡನೆಯ ಗೋಪುರ ಹಾಗೂ ಮೇಲಿನ ಅಗ್ರಗೋಪುರದ ನಿರ್ಮಾಣಗಳೆಲ್ಲ ಮಟ್ಲ ಕುಮಾರ ಅನಂತರಾಜನ ಕಡೆಯಿಂದ ಆದದ್ದು. ಅದರದೇ ಒಂದು ಪ್ರತ್ಯೇಕ ಶಾಸನ - ಅಧ್ಯಾಯವಾಗಬಹುದು.

ಶ್ರೀನಿವಾಸನ ಸೇವೆಯಲ್ಲಿ ತಮ ತಮಗೆ ತೋಚಿದಂತೆ ತಮತಮಗೆ ಅನುಕೂಲವಾದ ರೀತಿಯ ಕೈಂಕರ್ಯ ಸಲ್ಲಿಸಿದವರು ಹಲವು ಹನ್ನೊಂದು ಮಂದಿ. ಚಂದ್ರಗಿರಿಯ ಮಲ್ಲಣ ಅಥವಾ ಮಾಧವದಾಸನು ಮಣಿಮಂಟಪ (ತಿರುಮಾಮಣಿ ಮಂಟಪ) ವನ್ನು ನಿರ್ಮಿಸಿದರೆ ಕೃಷ್ಣದೇವರಾಯನು ಸ್ವಾಮಿಗೆ ಹೊಸ ಕಿರೀಟವನ್ನು ಮಾಡಿಸಿದ. ಅಚ್ಯುತರಾಯನ ಸ್ವಾಮಿಯ ಅರ್ಚನೆಯನ್ನು ತಾನೇ ನೆರವೇರಿಸಿದ. ಬೆಟ್ಟವನ್ನೇರುವ ಹಾದಿಯಲ್ಲಿ ಮೆಟ್ಟಿಲನ್ನು ಕಟ್ಟಿಸಿದವನು ಮಟ್ಲಕುಮಾರ ಅನಂತರಾಜ.

ಮಟ್ಲಸೀಮೆಯ ಪ್ರಾಧಾನ್ಯ ಕಂಡು ಬರುವುದು ವಿಜಯನಗರ ಸಾಮ್ರಾಜ್ಯ ತಾಳಿ ಕೋಟೆಯ ಯುದ್ಧದಲ್ಲಿ ಪತನವಾಗಿ ರಾಜಧಾನಿಯು ಪೆನುಗೊಂಡೆಗೆ ವರ್ಗವಾದ ನಂತರದ ಕಾಲದಲ್ಲಿ. ಭಾನುವಂಶದ ದೇವಚೋಡ ಕುಲದವರು ಮಟ್ಲದವರು. ಕಡಪ ಜಿಲ್ಲೆಯ ರಾಯಚೋಟಿ, ಬದ್ವೇಲು, ಸಿದ್ಧವಟ ಪುಲ್ಲಂಪೇಟೆ (ರಾಜಂಪೇಟೆ) ಪ್ರಾಂತ್ಯಗಳೆಲ್ಲ ಸೇರಿ ಮಟ್ಲವಾರಿ ಸೀಮೆಯೆಂದೇ ಪ್ರಸಿದ್ಧವಾಗಿದ್ದಿತು. ಜೀರ್ಣ ಮುಖವಾದ ವಿಜಯನಗರದ ಮುಂದುವರಿಕೆಗೆ ಮಟ್ಲ ವಂಶದವರೂ ಮುಖ್ಯರಾಗಿದ್ದರು. ಇವರಲ್ಲಿ ಮೊದಲಿಗೆ ಪ್ರಸಿದ್ಧನಾದವನು ಅನಂತರಾಜ. ಕವಿಯೂ ಆಗಿದ್ದ ರಾಜ ಈತ. ಕಾಕುಸ್ಥ ವಿಜಯಮು - ತೆಲುಗು ಕಾವ್ಯವನ್ನು ಬರೆದವನು.

ತಿರುಮಲೆಯಲ್ಲಿ

# ನವರಾತ್ರಿ ಬ್ರಹ್ಮೋತ್ಸವ

**17-10-2001**

ರಿಂದ

**25-10-2001**



ವೀಣಾಪಾಣಿ

## ನಿಗಮ ಗೋಚರ ಸ್ವಾಮಿ



ವಿದ್ಯುದ್ದೀಪ ಶೋಭೆಯಲ್ಲಿ

**ತಿರುಮಲೆಯ ಸ್ವಾಮಿ**

ಆಲಯ

ರಾಜಗೋಪುರ

⇩





ಅಲಿಪಿರಿಯಲ್ಲಿನ ಪಾದಾಲ ಮಂಟಪದಲ್ಲಿನ ವಿಗ್ರಹ ಪ್ರತಿಷ್ಠಾಪನೆಯ ಪೂಜೆ.

ಸ್ವಾಮಿಯ ಪಾದುಕೆಗಳ ಮೆರವಣಿಗೆ.



ಎಸ್. ವಿ. ಡೈರಿ ಫಾರಂನಲ್ಲಿ ಶ್ರೀಕೃಷ್ಣಾಷ್ಟಮಿ ಸಂದರ್ಭದಲ್ಲಿ

ಕಾರ್ಯನಿರ್ವಹಣಾಧಿಕಾರಿ ದಂಪತಿಗಳಿಂದ ನಡೆದ ಗೋಪೂಜೆ.















1. ತಿರುಮಲೆಯಲ್ಲಿ ಉಚಿತ ಬಸ್ ಆರಂಭ.
2. ಶ್ರೀನಿವಾಸಕಲ್ಯಾಣ ನಾಟಕ ದೃಶ್ಯ.
3. ಬರ್ಡ್ ಆಸ್ಪತ್ರೆಯಲ್ಲಿ ವಿಚಾರ ಸಂಕಿರಣ.

1. ತಿರುಮಲೆಯಲ್ಲಿ ಕರ್ನಾಟಕ ರಾಜ್ಯಪಾಲರು ಶ್ರೀಮತಿ ವಿ. ರಮಾದೇವಿ.
2. ಶ್ರೀನಿವಾಸಕಲ್ಯಾಣ ನಾಟಕದಲ್ಲಿ ಸನ್ಮಾನ.
3. ಬರ್ಡ್ ಆಸ್ಪತ್ರೆಯ ಅನುಕೂಲ ಪರಿಶೀಲನೆ.

ಈತನ ಮಗ ತಿರುವೆಂಗಳನಾಥ. ತಿರುವೆಂಗಳನಾಥನ ಮಗನೇ ಅಲಿಪಿರಿಯ ಮೂಲಕ ಮೆಟ್ಟಿಲು ಕಟ್ಟಿಸಿದ ಮಟ್ಲಕುಮಾರ.

ಮಟ್ಲ ಕುಮಾರನ ಹೆಸರು ತಿರುಪತಿಯ ಚರಿತ್ರೆಯಲ್ಲಿ ಬಹುಕಾಲ ನಿಲ್ಲುವಂತಹದ್ದು. ತಿರುಪತಿಯ ಗೋವಿಂದರಾಜಸ್ವಾಮಿಯ ಹೊರಗಡೆಯ ಗೋಪುರದ ಮೇಲೆ ತಿರುವೆಂಗಳನಾಥಯ್ಯನು ಕುಟುಂಬ ಸಮೇತನಾಗಿ ದರ್ಶನವನ್ನು ನೀಡುತ್ತ ಇದ್ದಾನೆ. ಈ ಗೋಪುರ ನಿರ್ಮಾಣ ಈತನ ಪುತ್ರ ಅನಂತರಾಜ ನಿಂದಲೇ ಆದದ್ದು ಎಂಬುದನ್ನು ಇಲ್ಲಿನ ಶಾಸನವು ಸ್ಪಷ್ಟಪಡಿಸುತ್ತದೆ. (ಶ್ರೀಮನ್ಮಹಾಮಂಡಲೇಶ್ವರ ಮಟ್ಲ ತಿರುವೆಂಗಳನಾಥರಾಜಯ್ಯದೇವ ಚೋಡ ಮಹಾರಾಜಯ್ಯವಾರಿ ಕುಮಾರ ಅನಂತ ರಾಜಯ್ಯವಾರು ತಮ ಉಭಯಂಗಾ ಕಟ್ಟಿಂಚಿನ ಗೋಪುರಂ) ತಿರುಪತಿ ಯಿಂದ ಬೆಟ್ಟಕ್ಕೆ ಹೋಗುವ ಹಾದಿಯಲ್ಲಿ ಒಮ್ಮೆಲೇ ದೂರಕ್ಕೂ ಕಂಡುಬರುವ ಮೂರು ಗೋಪುರಗಳುಂಟು. ಇವುಗಳಲ್ಲಿ ಮೊದಲನೆಯ ಗೋಪುರದ ಹೊರತು ಮಿಕ್ಕ ಎರಡು ಗೋಪುರಗಳು ಮಟ್ಲ ಕುಮಾರನಿಂದ ನಿರ್ಮಿತವಾದವುಗಳೇಯೆ. ಎರಡನೆಯ ಗೋಪುರದ ಒಳಗಡೆ ಪೂರ್ವ ಬಾಗದಲ್ಲಿ ಮಟ್ಲ ಕುಮಾರನ ತಂದೆ ಹಾಗೂ ತಾಯಿಯರ ವಿಗ್ರಹಗಳು ಸ್ವಾಮಿಯ ಸೇವೆಯಲ್ಲಿ ನಿಂತಂತೆ ಚಿತ್ರಿತವಾಗಿವೆ. ತಿರುವೆಂಗಳನಾಥ ಹಾಗೂ ಅವನ ಪತ್ನಿ ಚೆನ್ನಮ್ಮಾ ಎಂಬ ಲೇಖಗಳು ತೆಲುಗು ಹಾಗೂ ಗ್ರಂಥ ಲಿಪಿಗಳಲ್ಲಿ ಕಂಡುಬರುತ್ತವೆ. ಈ ಗೋಪುರವನ್ನು ಕಟ್ಟಿಸಿದ್ದು - 'ಈ ಗೋಪುರಂ ಕಟ್ಟಿಂಚಿನವಾರು ಮಟ್ಲಕುಮಾರ ಅನಂತರಾಜು ವಾರು' - ಎಂಬ ಶಿಲಾಲೇಖಗಳೂ ಇಲ್ಲಿಯೇ ಇದೆ. (ಎರಡೂ ಲಿಪಿಯಲ್ಲಿ) ಈ ಮಟ್ಲಕುಮಾರ ಅನಂತರಾಜನೇ ಅಲಿಪಿರಿಯಿಂದ ತಿರುಮಲೆಗೆ ಮೆಟ್ಟಿಲನ್ನು ಕಟ್ಟಿಸಿದನೆಂಬ ವಿವರವನ್ನು ಅಲಿಪಿರಿಯ ಪಾದಾಲ ಮಂಟಪದಲ್ಲಿನ ಪೂರ್ವ ಪಶ್ಚಿಮಗಳ ಒಳಗೋಡೆಗಳ ಮೇಲಿನ ತೆಲುಗು, ಗ್ರಂಥ ಲಿಪಿಗಳ ಶಿಲಾಶಾಸಗಳದಲ್ಲಿ ತಿಳಿಸಲಾಗಿದೆ. ಪೂರ್ವದ ಗೋಡೆಯ ಮೇಲೆ ಹದಿನಾರು







ಆಗಸ್ಟ್ 2001 ರಲ್ಲಿ ಜೀರ್ಣೋದ್ಧಾರಗೊಂಡ ಪಾದಾಲ ಮಂಟಪದ ವಿಗ್ರಹ ವಿವರ.



ಪುನರ್ನವೀಕರಣಗೊಂಡ ಪಾದಗಳ ಮಂಟಪದಲ್ಲಿ ಪೂಜಾನಿರತ
ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ನಾರಾಯಣ.

ಸಾಲುಗಳಲ್ಲಿ ಹರಡಿದ ತೆಲುಗು ಸೀಸಮಾಲಿಕಾ ಪದ್ಯವಾದರೆ ಪಶ್ಚಿಮದ ಗೋಡೆಯ ಮೇಲೆ ಇಪ್ಪತ್ನಾಲ್ಕು ಸಾಲಿನಲ್ಲಿ ಹರಡಿದ ಗ್ರಂಥಲಿಪಿಯ ವಸ್ತು ಇದ್ದು, ಮಟ್ಲ ಕುಮಾರ ಅನಂತರಾಜನ ಶೌರ್ಯಪ್ರತಾಪಗಳನ್ನು, ದಾನ ಧರ್ಮಗಳನ್ನು ವಿವರವಾಗಿ ತಿಳಿಸುತ್ತವೆ. (269 ಜಿ.ಟಿ. - 25 - ತಿ.ತಿ.ದೇ. ಶಾಸನಗಳು ಸಂಪುಟ - 6) ಪುಟ 151 - 157. ಅದರ ತಾತ್ಪರ್ಯ ಹೀಗೆ-

ಶ್ರೀ ವೆಂಕಟೇಶ್ವರಸ್ವಾಮಿಯ ಸೇವಾ ದುರಂಧರನಾದವನೂ, ವೆಂಕಟಾಚಲ ಅಹೋಬಿಲಗಳ ಮಧ್ಯದ ಭೂಭಾಗದ ವೈಭವವನ್ನು ಪಡೆದವನೂ, ಫಾಲಗಿರಿ, ಅನಿಮೆಲ, ಪೀಲೇರು, ಚಪ್ಪಲ್ಲಿ, ವೆಂಪಲ್ಲಿ ರಣ ಭೂಮಿಗಳ ಕಪರ್ದಿಯೂ, ಗೊಟ್ಟಿಕಲ್, ಕಲ್ಕಡ, ಗುಂಡ್ಲೂರು, ಮುಪ್ಪೂರುಗಳ ಶತ್ರುಗಳ ರೆಕ್ಕೆಗಳನ್ನು ಕತ್ತರಿಸಿದವನೂ, ಅನೇಕ ದಾನ ಧರ್ಮಗಳನ್ನು ಮಾಡಿದವನೂ ಆದವನು ಮಟ್ಲಕುಮಾರ ಅನಂತರಾಜ. (ಪಟ್ಟಿ ಬಹು ದೀರ್ಘವಾಗಿದೆ) ತಿರುಮಲೆಯ ದೇವರಿಗೆಂದು ಬಂಗಾರದ ಕುದುರೆ, ಆನೆ, ಸಮರ ಭೂಪಾಲವಾಹನಗಳನ್ನು ನೀಡಿದ. ಪದ್ಮಪೀಠ, ರತ್ನ ಕಿರೀಟ, ನಿವೇದನೆಗಳನ್ನು ಸಮರ್ಪಿಸಿದ. ಒಂದು ಕೇಳಿಮಂಟಪವನ್ನೂ **ಸೋಪಾನ ಮಾರ್ಗವನ್ನೂ** ನಿರ್ಮಿಸಿದ. ಅಗ್ರಗೋಪುರವನ್ನು (ಮೊದಲ ಬೆಟ್ಟದ ಮೇಲಿರುವ ಗಾಳಿ - ಖಾಲಿಗೋಪುರವೆಂದು ಕರೆಯಲ್ಪಡುವ ಈಗಿನ ನಾಮಾಲಗೋಪುರಂ) ನಿರ್ಮಿಸಿದನು. ತಿರುಪತಿಯಿಂದ ತಿರುಮಲೆ ಬೆಟ್ಟಕ್ಕೆ ಹೋಗುವ ದಾರಿಯಲ್ಲಿ ಒಂದು ವೆಂಕಟೇಶ್ವರಸ್ವಾಮಿಯ ವಿಗ್ರಹವನ್ನು ಸ್ಥಾಪಿಸಿದನು.

ಈ ವೆಂಕಟೇಶ್ವರಸ್ವಾಮಿಯ ವಿಗ್ರಹ ಎಲ್ಲಿದೆಯೆಂಬುದು ಪತ್ತೆಯಾಗಿಲ್ಲವಾದರೂ ಆತ ಅಂದು (ಕ್ರಿ.ಶ. 1628) ಕಟ್ಟಿಸಿದ ಪಾದಾಲ ಮಂಟಪವನ್ನು ಮತ್ತೆ ಈಗ ಜೀರ್ಣೋದ್ಧಾರ ಮಾಡಲಾಗಿದೆ. ಇದರಲ್ಲಿರುವ ಸ್ವಾಮಿಯ ಪಾದುಕೆಗಳಿಗೆ ನಮನ ಸಲ್ಲಿಸಿ ಬೆಟ್ಟವನ್ನೇರಿದರೆ ಕಾಲು ನೋವಾಗದು ಎಂಬುದು ನಂಬಿಕೆ ಇಂದಿಗೂ ಪ್ರಚಲಿತವಾಗಿದೆ. ಇದರ ನಿರ್ಮಾಣವನ್ನು ಕುರಿತು ಸೀಸಪದ್ಯ ಶಾಸನದ ಕೊನೆಯಲ್ಲಿ ವಿವರವಾಗಿ ಹೇಳಲಾಗಿದೆ. ಅದು ಹೀಗೆ -

**.......ಶ್ರೀ ಮಟ್ಲ ತಿರುವೆಂಗಳ ಮಾನವಾಧೀಶ್ವರಪುತ್ರರತ್ನಮು, ರಾಜ ಪುಂಗವುಂಡು ಶ್ರೀ ವೈಭವಾಲಂಬ ಚೆನ್ನಮಾಂಬಾ ಗರ್ಭ ಕಮನೀಯ ಶುಕ್ತಿ ಮುಕ್ತಾ ಫಲುಂಡು, ಲೋಕೋತ್ತರುಂಡು, ಜಗದೇಕ ವದಾನ್ಯುಂಡು, ಧೀರುಂಡು, ಮಟ್ಲಕುಮಾರ ನಂತುಂಡು ಅಬ್ಜಸಂಭವ ಭವ ಸನಕಾದಿ ದೇವ ಮೌನಿ ಸೇವ್ಯಂಬು ಶ್ರೀಪಾದ ಮಂಟಪಂಬು ಪ್ರಬಲತರ ಶೇಷ ಭೂಧರ ಪ್ರಾಂತ ಕ್ರಾಂತ ಧರಣಿಗಟ್ಟಿಂಚಿ ನಾಚಂದ್ರತಾರಕಮುಗ.**

- ಬ್ರಹ್ಮ ಈಶ್ವರ ಮೊದಲಾದ ದೇವತೆಗಳೂ, ಸನಕಾದಿ ಮುನಿಗಳೂ, ಸೇವಿಸತಕ್ಕ ಪ್ರಬಲತರವಾದ ಶೇಷಗಿರಿಯ ಭೂಭಾಗದಲ್ಲಿ ಚಂದ್ರ ತಾರೆಗಳಿರುವಷ್ಟು ಕಾಲವೂ ಇರುವಂತೆ ಶ್ರೀಪಾದ ಮಂಟಪವನ್ನು ಕಟ್ಟಿಸಿದ.

ಈಚೆಗೆ ತಿರುಮಲೆಯ ಈ ಹಾದಿಯಲ್ಲಿ ನಡೆದು ಬೆಟ್ಟವನ್ನೇರಲು ಆಯಾಸವಾಗದಂತೆ ಸಾಕಷ್ಟು ನೆರಳು, ವಿಶ್ರಾಂತಿ ಸ್ಥಳಗಳು, ನೀರಿನ ತಾಣಗಳು, ಅಲ್ಪೋಪಹಾರ ಸೌಲಭ್ಯ, ಶೌಚಗೃಹ ಸೌಲಭ್ಯ. ಪ್ರಥಮ ಚಿಕಿತ್ಸಾವಕಾಶಗಳನ್ನು, ರಕ್ಷಕ ಭಟರ ಗಸ್ತು ತಿರುಗುವಿಕೆಯನ್ನು ಏರ್ಪಡಿಸಲಾಗಿದೆ. ಅಲ್ಲಲ್ಲಿ ಕುಳಿತು ಆನಂದದಿಂದ ನಡೆದು ಆನಂದ ನಿಲಯದ ಸ್ವಾಮಿಯತ್ತ ಹೋಗಿ ಬರಬಹುದಾಗಿದೆ. ಇಂತಹ ಒಂದು ಸೌಲಭ್ಯವನ್ನು, ಶಾಂತ ಸುಖವನ್ನು ಆತ್ಮ ತೃಪ್ತಿಯನ್ನು, ಅನುಭವಿಸುವ ಹೊತ್ತಿನಲ್ಲಿ ಮೆಟ್ಟಿಲನ್ನು ಕಟ್ಟಿಸಿದ ಮಟ್ಲ ಕುಮಾರ ಅನಂತರಾಜನನ್ನು ನೆನೆಯುವುದು ಸೂಕ್ತವೆನ್ನಿಸುತ್ತದೆ.

★★★★★

ಮಟ್ಲಕುಮಾರ ಅನಂತರಾಯ ಅತಿಹೆಚ್ಚಿನ ದಾನ ಧರ್ಮಗಳನ್ನು ಮಾಡಿ ಹೆಸರಾದವನು. ಸೇತುವಿನಿಂದ ಶೀತಾಚಲದವರೆಗು (ರಾಮೇಶ್ವರದಿಂದ ಹಿಮಾಲಯದ ಬದರಿಯವರೆಗೆ) ಯಾತ್ರಿಕರಿಗಾಗಿ ಅನ್ನ ಸತ್ರಗಳನ್ನು ನಿರ್ಮಿಸಿದ. ಬೇರೆ ಬೇರೆ ಗುಡಿಗಳ ಗೋಪುರಗಳನ್ನು ಕಟ್ಟಿಸಿ ಜೀರ್ಣೋದ್ಧಾರ ಮಾಡಿಸಿದ. ಹಲವು ದೇವತಾವಿಗ್ರಹಗಳಿಗೆ ಹಲವು ರೀತಿ ಆಭರಣಗಳನ್ನು ಮಾಡಿಸಿ ಅರ್ಪಿಸಿದ. ತಿರುಪತಿಯ ಗೋವಿಂದರಾಜ ಸ್ವಾಮಿ ದೇವಾಲಯದ ಹೊರಗಿನ ರಾಜಗೋಪುರ ವನ್ನು ಕಟ್ಟಿಸುವಾಗ ಅಪರಿಮಿತವಾದ ಧನರಾಶಿಯನ್ನು ವೆಚ್ಚ ಮಾಡಿದನೆಂದು ದಂತಕಥೆಯಾಗಿ ಪ್ರಚಲಿತವಾಗಿದೆ.

# ಎಸ್. ವಿ. ಡ್ಯೆರಿ ಫಾರಂ

- ಡಾ|| ಪಿ. ಕೊಂಡಾರೆಡ್ಡಿ.

ತಿರುಮಲೆ ತಿರುಪತಿ ದೇವಾಲಯಗಳ "ಶ್ರೀ ವೆಂಕಟೇಶ್ವರ ಡ್ಯೆರಿ ಫಾರಂ" ಒಂದು ಸೇವಾ ಸಂಸ್ಥೆಯಾಗಿ 1933 ರಿಂದಲೂ ಘನವಾದ ಉದ್ದೇಶದಲ್ಲಿ ತನ್ನನ್ನು ತಾನು ತೊಡಗಿಸಿಕೊಂಡು ಮುಂದುವರಿದಿದೆ.

ಹಾಗೆ ನೋಡಿದರೆ ಕಳೆದ ಒಂದು ಸಾವಿರ ವರ್ಷಗಳಿಂದಲೂ ಗೋ ಶಾಲೆಯು ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯ ಆಲಯದ ಒಂದು ಅಂಗವಾಗಿ ಸ್ವಾಮಿ ಸೇವೆಯಲ್ಲಿ ಅನುದಿನದ ಕ್ಯೆಂಕರ್ಯವನ್ನು ಸಲ್ಲಿಸುತ್ತ ಬೆಳೆದು ಬಂದಿದೆ. ಸ್ವಾಮಿಯ ಮುಂದಿನ ನಂದಾದೀಪವನ್ನು ಬೆಳಗಿಸಲು ತುಪ್ಪವನ್ನು ಕೊಡಮಾಡುವುದಕ್ಕೆಂದು ಕರೆಯುವ ಹಸುಗಳನ್ನು ಆಲಯಕ್ಕೆ ದಾನಮಾಡಿ, ಈ ಕ್ಯೆಂಕರ್ಯ ಆಚಂದ್ರಾರ್ಕವಾಗಿ ನಡೆಯಬೇಕೆಂದು ಬಯಸಿರುವ ದಾನಶಾಸನಗಳು ತಿರುಮಲೆಯ ಶಾಸನ ಸಂಪದದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಾಣಬಹುದಾಗಿದೆ. ಹೀಗಾಗಿ ಕ್ರಿಸ್ತಶಕ ದಾರಂಭ ಕಾಲದಿಂದಲೂ ಇಲ್ಲಿ ಒಂದು ಆಲಯ ಪೂಜಾಪದ್ಧತಿ ಬೆಳೆದು ಬಂದಂತೆ ಇಲ್ಲಿನ ಗೋಶಾಲೆಯೂ ದಿನೇ ದಿನೇ ಪ್ರವರ್ಧಮಾನವಾಗಿ ಬೆಳೆದಿರಬೆಕು. ಮಹಂತರ ಆಡಳಿತದಲ್ಲಿ ಆಲಯವಿದ್ದಾಗ ಬೆಟ್ಟದ ಮೇಲುಗಡೆ ಆಲಯಕ್ಕಾಗಿ ಒಂದು ಗೋಶಾಲೆಯೂ ಬೆಟ್ಟದ ಕೆಳಗಡೆಯ ಆಲಯಗಳ ಆರಾಧನಾ ಅವಸರಗಳ ಪೂರ್ಯೆಕೆಗಾಗಿ ಒಂದು ಗೋಶಾಲೆಯೂ ಇದ್ದಿತು. 1933 ರಲ್ಲಿ ತಿ.ತಿ.ದೇ. ಕಾಯದೆಯುಂಟಾದಾಗ ಧರ್ಮದರ್ಶಿ ಮಂಡಳಿಯ ಮೇಲು ವಿಚಾರಣೆಗೆ ಆಡಳಿತ ಹಸ್ತಾಂತರವಾದಾಗ ಎರಡೂ ಗೋಶಾಲೆಗಳೂ ಒಂದಾಯಿತು. 1956 ರಲ್ಲಿ ತಿರುಪತಿ - ಚಿತ್ತೂರು ಮಾರ್ಗದಲ್ಲಿನ ಈಗಿರುವ 400 ಎಕರೆಗಳ ವಿಶಾಲವಾದ ಎಸ್.ವಿ. ಡ್ಯೆರಿಫಾರಂ ಎದ್ದು ನಿಲ್ಲುವಂತಾಯಿತು.

ಎಸ್.ವಿ. ಡ್ಯೆರಿ ಫಾರಂನ ಮುಖ್ಯ ಉದ್ದೇಶವೆಂದರೆ ಶ್ರೀ ವೆಂಕಟೇಶ್ವರ ಸ್ವಾಮಿ ಆಲಯ ಹಾಗೂ ಮತ್ತಿತರ ತಿ.ತಿ.ದೇ. ಆಲಯಗಳ ನಿತ್ಯ ಪೂಜೆಯ ಅಗತ್ಯವಾದ ಶುದ್ಧ ಹಾಲು, ಮೊಸರು, ತುಪ್ಪಗಳನ್ನು ಸರಬರಾಜು ಮಾಡುವುದು. ಅಭಿಷೇಕ - ಅನ್ನಪ್ರಸಾದಗಳಲ್ಲಿನ ಹಾಲು ಮೊಸರು ತುಪ್ಪಗಳ, ಅಗತ್ಯಗಳನ್ನು ಪೂರ್ಯೆಸುವುದು. ಸ್ವಾಮಿಯ ಸೇವೆಯಲ್ಲಿ ನಡೆಸುವ ಪುನುಗು ಸೇವೆಯಲ್ಲಿನ ಪುನುಗು ಸರಬರಾಜು ಮಾಡುವುದು. ದೇವರ ಮೆರವಣಿಗೆಯಲ್ಲಿ ಬೇಕಾಗತಕ್ಕ ಆನೆ, ಕುದುರೆ, ಗಂಗೆಗೋವುಗಳನ್ನು ಸಾಕಿ, ಸಲಹಿ, ಸಿದ್ಧಗೊಳಿಸುವುದು. ಆಲಯಗಳಿಗೆ ಬೇಕಾಗುವ ತೀರ್ಥವನ್ನು ತರುವಲ್ಲಿಯೂ ಸಹ ಆನೆಗಳನ್ನು ಬಳಸಲಾಗುತ್ತದೆ.

ಆರ್ಥಿಕವಾಗಿ ಲಾಭದಾಯಕವಲ್ಲದಿದ್ದರೂ ಗೋದಾನವೆಂದು ಭಕ್ತರು ನೀಡುವ ಹಸುಗಳನ್ನೂ ಸಾಕಿ ಸಲಹಲಾಗುತ್ತಿದೆ. ಸ್ವಾಮಿಗೆ ಗೋದಾನ ಮಾಡುವ ಭಕ್ತರಿಗೆ ಡ್ಯೆರಿಫಾರಂನಲ್ಲಿನ ವೇಣುಗೋಪಾಲ ಸ್ವಾಮಿಯನ್ನು ಮುಂದೆ ಗೋಪೂಜೆ ಮಾಡಲು ಗೋವುಗಳನ್ನು ನೀಡಲಾಗುವುದು. ಈ ವೇಣುಗೋಪಾಲ ಸ್ವಾಮಿ ಆಲಯವನ್ನು 1982 ರಲ್ಲಿ ನಿರ್ಮಿಸಲಾಗಿದ್ದು ನಿತ್ಯವೂ ಪೂಜೆ ನಡೆಯುತ್ತಿದೆ. ಪ್ರತಿ ವರ್ಷವೂ ಗೋಕುಲಾಷ್ಟಮಿಯನ್ನು ಇಲ್ಲಿ ವ್ಯೆಭವದಿಂದ ಆಚರಿಸಲಾಗುತ್ತದೆ. ಗೋಪೂಜೆಯನ್ನು ವಿಧಿವತ್ತಾಗಿ ನಡೆಸಲಾಗುತ್ತದೆ. ಗೋದಾನ ಗೋಸಮರ್ಪಣೆ ಮಾಡ ಬಯಸುವ ಭಕ್ತರು - ನಿರ್ದೇಶಕರು ಎಸ್.ವಿ. ಡ್ಯೆರಿಫಾರಂ ತಿ.ತಿ.ದೇ. ತಿರುಪತಿ - ಇವರನ್ನು ವಿಚಾರಿಸಬಹುದು. (ದೂರವಾಣಿ - 08574 - 48140, 08574 - 48006).

ಈಚಿನ ದಿನಗಳಲ್ಲಿ ಶ್ರೀ ಪದ್ಮಾವತೀ ಮಹಿಳಾ ವಿಶ್ವವಿದ್ಯಾನಿಲಯ ಮೊದಲಾದ ವಿವಿಧ ಸಂಸ್ಥೆಗಳಿಗೆ ಡ್ಯೆರಿ ಫಾರಂನ ಭೂಮಿಯನ್ನು ಬಿಟ್ಟು ಕೊಡಲಾಗಿದೆ. ಆದರೂ ಇರುವ ನೂರು ಎಕರೆ ಸ್ಥಳದಲ್ಲಿ ಆಧುನಿಕ ತಂತ್ರಜ್ಞಾನವನ್ನು ಅಳವಡಿಸಿಕೊಂಡು ಅಧಿಕ ಇಳುವರಿಯ ಹುಲ್ಲನ್ನು ಬೆಳೆಸುತ್ತ ಇರುವ ಜಾನುವಾರುಗಳಿಗೆ ತಕ್ಕ ಮೇವಿನ ಉತ್ಪಾದನೆ ಮಾಡಲಾಗುತ್ತಿದೆ. ಹನಿ ನೀರಾವರಿ, ಒತ್ತು ಸಾಲು ಉಳುಮೆ - ಮೊದಲಾದ ಪದ್ಧತಿಗಳಿಂದ ಹುಲ್ಲು ಹೆಚ್ಚು ಬೆಳೆಯಾಗಿ ಹಸುಗಳ ಹಾಲಿನ ಉತ್ಪಾದನೆ ಸಾಧಾರಣ ಸರಾಸರಿ ದಿನಕ್ಕೆ 11 ಲೀಟರ್ ಹೆಚ್ಚಾಗಿದೆ.

ಡ್ಯೆರಿ ಫಾರಮ್ಮಿನಲ್ಲಿ ಉತ್ಪತ್ತಿಯಾಗುವ ದಿನಂಪ್ರತಿ ಹಾಲು ಆಲಯಗಳ ಅಗತ್ಯಗಳಿಗಿಂತ ಹೆಚ್ಚಿಗೆ ಇದ್ದರೂ ಸಹ ಬೇರೆ ಬೇರೆ ಆಲಯಗಳ ಸೇವಾ ಸಂಸ್ಥೆಗಳ ಅಗತ್ಯಕ್ಕೆ ಬೇಕಾಗುವ ಹೆಚ್ಚಿನ ಹಾಲನ್ನು ಆಂಧ್ರಪ್ರದೇಶದ ಡ್ಯೆರಿ



ಡೆವಲಪ್‌ಮೆಂಟ್ ಕಾರ್ಪೋರೇಷನ್ನಿನ ಕಡೆಯಿಂದ ಪಡೆಯಲಾಗುತ್ತಿದೆ. ಈ ರೀತಿಯಲ್ಲಿ ಹಾಲು ಸರಬರಾಜು ಹೊಂದುವ ಆಲಯಗಳೆಂದರೆ -

1. ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯ.
2. ಶ್ರೀ ಕಪಿಲೇಶ್ವರಸ್ವಾಮಿ ಆಲಯ, ತಿರುಪತಿ.
3. ಶ್ರೀ ಕೋದಂಡರಾಮಸ್ವಾಮಿ ಆಲಯ, ತಿರುಪತಿ.
4. ಶ್ರೀ ಗೋವಿಂದರಾಜಸ್ವಾಮಿ ಆಲಯ, ತಿರುಪತಿ.
5. ಶ್ರೀ ಪದ್ಮಾವತೀ ಅಮ್ಮನವರ ಆಲಯ, ತಿರುಚಾನೂರು.
6. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ, ಶ್ರೀನಿವಾಸಮಂಗಾಪುರ.
7. ಶ್ರೀ ಬೇಡಿ ಆಂಜನೇಯ ಸ್ವಾಮಿ ಆಲಯ, ತಿರುಮಲೆ.
8. ಶ್ರೀ ಬಾಟ ಗಂಗಮ್ಮ ಆಲಯ, ತಿರುಮಲೆ.
9. ಶ್ರೀ ವರಾಹಸ್ವಾಮಿ ಆಲಯ, ತಿರುಮಲೆ.
10. ಶ್ರೀ ವಿನಾಯಕಸ್ವಾಮಿ ಆಲಯ 2 ನೇ ಘಾಟ್ ರಸ್ತೆ, ತಿರುಮಲೆ.
11. ಶ್ರೀ ಏಡೂರು ಆಂಜನೇಯಸ್ವಾಮಿ ಆಲಯ, ಚಿನ್ನಂಗಡಿವೀಧಿ, ತಿರುಪತಿ.
12. ಶ್ರೀ ಏಡೂರು ಆಂಜನೇಯಸ್ವಾಮಿ ಆಲಯ, ರಥಬೀದಿ, ತಿರುಪತಿ.
13. ಶ್ರೀ ಸೂರ್ಯನಾರಾಯಣಸ್ವಾಮಿ ಆಲಯ, ತಿರುಚಾನೂರು.

ಸೇವಾ ಸಂಸ್ಥೆಗಳು :

14. ಎಸ್.ವಿ. ಅನ್ನದಾನ ಕ್ಯಾಂಟೀನ್, ತಿರುಮಲೆ.
15. ಎಸ್.ವಿ. ವೇದಪಾಠಶಾಲೆ, ತಿರುಮಲೆ.
16. ಎಸ್.ವಿ. ಪೂರ್ ಹೋಂ, ತಿರುಪತಿ.
17. ಎಸ್.ವಿ..ಡಫ್ ಅಂಡ್ ಡಂಬ್ ಸ್ಕೂಲ್, ತಿರುಪತಿ.
18. ಎಸ್.ವಿ. ಅಂಗವಿಕಲರ ತರಬೇತಿ ಶಾಲೆ, ತಿರುಪತಿ.
19. ಎಸ್.ವಿ. ಬಾಲಮಂದಿರ, ತಿರುಪತಿ.

ತಿ.ತಿ.ದೇ. ಕ್ಯಾಂಟೀನ್‌ಗಳು :

20. ಎಸ್.ವಿ. ಗೆಸ್ಟ್ ಹೌಸ್ ಕ್ಯಾಂಟೀನ್, ತಿರುಮಲೆ.
21. ಎಸ್.ವಿ. ಗೆಸ್ಟ್‌ಹೌಸ್ ಕ್ಯಾಂಟೀನ್, ತಿರುಮಲೆ.
22. ಎಸ್.ವಿ. ಎಂಪ್ಲಾಯಿಸ್ ಕ್ಯಾಂಟೀನ್, ತಿರುಮಲೆ.



23. ತಿ.ತಿ.ದೇ. ಕಚೇರಿ ಕ್ಯಾಂಟೀನ್, ತಿರುಪತಿ.
24. ಸ್ವಿಮ್ಸ್ ಕ್ಯಾಂಟೀನ್, ತಿರುಪತಿ.
25. ಎಸ್.ಪಿ. ಗೆಸ್ಟ್‌ಹೌಸ್ ಕ್ಯಾಂಟೀನ್, ತಿರುಪತಿ.

ಇಂದು ಎಸ್.ವಿ. ಡೈರಿ ಫಾರಂನಲ್ಲಿ ಸುಮಾರು ಐದು ನೂರು ಹಸುಗಳಿವೆ. ಆರು ಆನೆಗಳು, ಎಂಟು ಕುದುರೆಗಳು, ಒಂಭತ್ತು ಪುನುಗು ಬೆಕ್ಕುಗಳು, 120 ಚುಕ್ಕೆಯ ಜಿಂಕೆಗಳು ಇವೆ. ಮೇಲಿನ ಜಾನುವಾರುಗಳಿಗಾಗಿ ಹುಲ್ಲು ಬೆಳೆಯಲು 120 ಎಕರೆ ಜಮೀನು ಇದೆ. ಸ್ವಾಮಿಯ ಏಕಾಂತಸೇವೆ ಹಾಗೂ ತೋಮಾಲಸೇವೆಗಳಲ್ಲಿ ಬಳಸಲು ಬೇಕಾಗುವ ಹಾಲಿಗಾಗಿ ತಿರುಮಲೆಯ ಗೋಶಾಲೆಯಲ್ಲಿ ಕರೆಯುವ ಹಸುವಿನ ಉಪಸ್ಥಿತಿಯಿರುತ್ತದೆ. ಸೇವಾ ವಿಭಾಗದಲ್ಲಿ ಇದೊಂದು ಮುಖ್ಯ ವಿಭಾಗವಾದದ್ದರಿಂದ ಆಡಳಿತವು ಈ ಡೈರಿ ಅಭಿವೃದ್ಧಿಗೆ ತಕ್ಕ ಪ್ರೋತ್ಸಾಹ ನೀಡುತ್ತಿದೆ. ಸೇವಾ ಸಿಬ್ಬಂದಿಯ ಭಕ್ತಿ, ಕರ್ತವ್ಯ ಪರಾಯಣತೆ ಯಿಂದಾಗಿ ಡೈರಿ ಫಾರಂ ದಿನೇ ದಿನೇ ಅಭಿವೃದ್ಧಿಯಾಗುತ್ತಿದ್ದು ದೇಶದಲ್ಲಿಯೇ ಮಾದರಿ ಡೈರಿಫಾರಂ ಎನ್ನಿಸಿಕೊಳ್ಳುವ ದಿನವೂ ದೂರವಿಲ್ಲವೆನಿಸುತ್ತದೆ.

ತಿ. ತಿ. ದೇವಸ್ಥಾನಗಳ ಡೈರಿ ಫಾರಂನಲ್ಲಿ ಗೋಸೇವೆಯು ನಡೆದಿದೆ ಎಂಬುದನ್ನು ತಿಳಿಸಲು ಹಿಂದಿನ ಪುಟದಲ್ಲಿ ನೀಡಿರುವ ಹಸುವಿನ ಭಾವಚಿತ್ರ ಸಾಕ್ಷಿಯಾಗುತ್ತದೆ. ಈ ಹಸು (ನಂ. 56) ಹುಟ್ಟು ಕುರುಡಿನೊಡನೆ 2-11-1993 ರಲ್ಲಿ ಹುಟ್ಟಿತು. ಪ್ರೀತಿ ವಾತ್ಸಲ್ಯಗಳಿಂದ ಕರುವನ್ನು ಬೆಳೆಸಲಾಯಿತು. ಬೆಳೆದು ದೊಡ್ಡದಾದ ಮೇಲೆ ಮೂರು ಬಾರಿ ಕರುಹಾಕಿರುವ ಈ ಹಸು 18-7-2001 ರ ಹೊತ್ತಿಗೆ ಧಿನಂಪ್ರತಿ 20 ಲೀಟರ್ ಹಾಲು ನೀಡುತ್ತಿದೆ. ಆದರೆ ಈ ಹಸುವಿಗೆ ದೃಷ್ಟಿಯಿಲ್ಲ. ಗೋಶಾಲೆಯ ಎಲ್ಲ ಸಿಬ್ಬಂದಿಯ ಪ್ರೀತಿ ಗೌರವಗಳಿಗೆ ಪಾತ್ರವಾದ ಹಸುವಿದು. ಗೋಶಾಲೆಯ ಎಲ್ಲ ಹಸುಗಳನ್ನೂ ಪ್ರೀತಿ ವಾತ್ಸಲ್ಯಗಳಿಂದ ಕಾಣಲಾಗುತ್ತಿದೆ. ಪರಿಶುಭ್ರತೆಗೆ ಪ್ರಾಧಾನ್ಯ ನೀಡಿ ಗೋಶಾಲೆಯನ್ನು ಆರೋಗ್ಯಕರವಾಗಿ ಅಚ್ಚುಕಟ್ಟಾಗಿ ಇಟ್ಟುಕೊಂಡು ಎಲ್ಲ ತಿ.ತಿ.ದೇ. ಆಲಯಗಳಿಗೂ ಶುದ್ಧ ಹಾಲಿನ ಸರಬರಾಜು ಮಾಡಲಾಗುತ್ತಿದೆ.

ಹಲವಾರು ಮಂದಿ ದಾನಿಗಳು ಗೋಶಾಲೆಗೆ ದಾನಗಳನ್ನು ನೀಡುತ್ತಿದ್ದಾರೆ. ಈ ದಾನಗಳಿಗೆ ಆದಾಯಕರ ವಿನಾಯಿತಿ ದೊರೆಯುವಂತೆ ಮಾಡಲು ಪ್ರತ್ಯೇಕವಾದ ಗೋಸಂರಕ್ಷಣ ಸದನ, ಗೋಸೇವಾ ಟ್ರಸ್ಟ್‌ಗಳನ್ನು ಏರ್ಪಾಡು ಮಾಡುವ ಬಗ್ಗೆ ತೀವ್ರ ಪರಿಶೀಲನೆ ನಡೆದಿದೆ. ಈ ಸೇವೆಗಳಿಗಾಗಿ ಈಗಾಗಲೇ 40 ಲಕ್ಷರೂಪಾಯಿ ದಾನವಾಗಿ ಬಂದಿದೆ. ಹೀಗಾಗಿ ಗೋದಾನದ ಹಾಗೂ ಗೋಸಂರಕ್ಷಣೆಯ ಪ್ರಾಚೀನ ಪರಂಪರೆ ಮುಂದುವರೆದಿದೆ.

★★★★★



# ಆಗಸ್ಟ್ ತಿಂಗಳಲ್ಲಿ ಅಧಿಕವಾದ
# ಶ್ರೀವಾರಿ ಸೇವೆ



ಯಾತ್ರಿಕರಿಂದ ಯಾತ್ರಿಕರಿಗೆ ಸಲ್ಲುವ ಶ್ರೀವಾರಿಸೇವೆಯಲ್ಲಿ ಭಕ್ತರು ಭಾಗವಹಿಸುವಿಕೆ ದಿನೇ ದಿನೇ ಬೆಳೆಯುತ್ತಿದೆಯೆಂದು ಕಂಡು ಬಂದಿದೆ. ಆಗಸ್ಟ್ 2001 ರಲ್ಲಿ ಸರಿಸುಮಾರು 3400 ಮಂದಿ ಯಾತ್ರಿಕರು ತಿರುಮಲೆಯ ವಿವಿಧ ಸ್ಥಳಗಳಲ್ಲಿ ಸಹಯಾತ್ರಿಕರ ಸೇವೆಯಲ್ಲಿ ನಿರತರಾಗಿದ್ದರು ಎಂದು ತಿಳಿಸಲು ಹರ್ಷವಾಗುತ್ತದೆ. ಇವರಲ್ಲಿ 2150 ಮಂದಿ ಪುರುಷರು ಹಾಗೂ 1250 ಮಂದಿ ಮಹಿಳೆಯರು ಎಂಬುದು ಗಮನಾರ್ಹ. ಇವರಲ್ಲಿ ಹೆಚ್ಚು ಮಂದಿ ಹಲವು ಹತ್ತು ಗುಂಪುಗಳಲ್ಲಿ ಬಂದು ಶ್ರೀವಾರಿಸೇವೆಯಲ್ಲಿ ಭಾಗವಹಿಸಿದ್ದರು. ಆಂಧ್ರಪ್ರದೇಶದ ನಂದ್ಯಾಲ, ಪಶ್ಚಿಮ ಗೋದಾವರಿ ಜಿಲ್ಲೆ ಮುಂತಾದ ಕಡೆಗಳಿಂದ ಸುಮಾರು ಹನ್ನೆರಡು ಗುಂಪುಗಳು ಸರಾಸರಿ ನಾಲ್ಕರಿಂದ ಆರು ದಿನಗಳ ಸೇವೆ ಸಲ್ಲಿಸಿದರೆ ತಮಿಳು ನಾಡಿನಿಂದ ಸುಮಾರು ಹದಿನೈದು ತಂಡಗಳು ಶ್ರೀವಾರಿ ಸೇವೆಯಲ್ಲಿ ಭಾಗ ವಹಿಸಿದ್ದವು. ಮದುರೈ, ಸೇಲಂ - ಮೊದಲಾದ ಕಡೆಯಿಂದ ಬಂದ ಗುಂಪುಗಳು ಆರರಿಂದ ಎಂಟು ದಿನಗಳ ಸೇವೆಯಲ್ಲಿ ತೊಡಗಿದ್ದವು.

ಇಲ್ಲಿ ಚೆನ್ನೈ ನಗರದ ಭಕ್ತರ ಬಗ್ಗೆ ಪ್ರತ್ಯೇಕವಾಗಿ ಹೇಳಬೇಕು. ಚೆನ್ನೈನ ತಿ.ತಿ.ದೇ. ವಿಚಾರಣಾಕೇಂದ್ರದಲ್ಲಿನ 'ಶ್ರೀವಾರಿ ಸೇವಾ ಸಮಿತಿ'ಯ ಮೂಲಕ ಐದು ತಂಡಗಳು ಒಂದೊಂದೂ ಐದುದಿನಗಳಿಗೆ ಕಡಿಮೆ ಯಿಲ್ಲದಂತೆ ಶಿಸ್ತಿನಿಂದಲೂ, ಭಕ್ತಿಯಿಂದಲೂ, ವಿನಯದಿಂದಲೂ ಭಕ್ತರ ಸೇವೆಗೆಂದು ತಿರುಮಲೆಯನ್ನು ಸೇರಿದ್ದವು. ಮುಂದಿನ ದಿನಗಳಿಗೆ ಇಲ್ಲಿಂದ ಮೊದಲೇ ಶ್ರೀವಾರಿಸೇವೆಯಲ್ಲಿ ಭಾಗವಹಿಸುವ ಭಕ್ತರು ಹೆಸರನ್ನು ನೊಂದಾಯಿಸುವ ಪದ್ಧತಿಯೂ ಉಂಟಾಗಿದೆ. ಒಂದೊಂದು ತಂಡಕ್ಕೂ ಒಬ್ಬ ಕೋ ಆರ್ಡಿನೇಟರ್ - ತಂಡದ ಸಮಾ ಯೋಜಕರು ಇದ್ದು, ಶಿಸ್ತು, ಅಚ್ಚುಕಟ್ಟುಗಳನ್ನೂ ಒಳಗೊಂಡಂತೆ ಸೇವೆ ಮಾಡಲಾಗುತ್ತಿದೆ.

ಆಗಸ್ಟ್ 26 ರಂದು ಶ್ರೀವಾರಿ ಸೇವೆಯ ಭಕ್ತರ ಸಂದರ್ಶನಕ್ಕೆ ಹೊರಟ ಸಪ್ತಗಿರಿ ಪತ್ರಿಕಾ ತಂಡಕ್ಕೆ ಸಿಕ್ಕದ್ದು ಚೆನ್ನೈನ ವಾಸುದೇವನ್ ಅವರ ತಂಡ. ಮುವತ್ತಾರು ಮಂದಿಯ ಈ ತಂಡದಲ್ಲಿ ಇಪ್ಪತ್ನಾಲ್ಕು ಮಂದಿ ಪುರುಷರು ಹದಿನಾಲ್ಕು ಮಂದಿ ಮಹಿಳೆಯರು. ವಾಸುದೇವನ್ ಹಾಗೂ ಅವರ ಪತ್ನಿ ವಿಮಲಾ ವಾಸುದೇವನ್, ರಘುನಾಥನ್ ಹಾಗೂ ವಿಜಯ, ಸಾರಥಿ ಹಾಗೂ ದೇವಕಿಸಾರಥಿ - ಹೀಗೆ ಪತಿಪತ್ನಿಯರು ಒಟ್ಟಿಗೆ ಸೇವೆ ಸಲ್ಲಿಸಿದರು. ಲಕ್ಷ್ಮಿಕಾಂತನ್, ಶ್ರೀನಿವಾಸನ್ ಅವರುಗಳು 65 ವರ್ಷಗಳವರಾದರೆ ಕೋಟೇಶ್ವರನ್ 28 ವರ್ಷದ ಯುವಕರು. ಎಂಟುಮಂದಿ ಕೋಟೇಶ್ವರನ್ ಜೊತೆಯ ವಯಸ್ಸಿನವರಾದರೆ ಮಿಕ್ಕವರು ಮಧ್ಯವಯಸ್ಕರು. ಯತೀಂದ್ರನ್, ಸರೋಜ, ಕಣ್ಣಬೀರನ್, ಪ್ರೇಮಾವತಿ, ಪದ್ಮಾವತಿ - ಮೊದಲಾದವರೆಲ್ಲ; ಒಂದು ನಾಲ್ಕು ಮಂದಿಯ ಹೊರತು, ಎಲ್ಲರೂ ಪದವೀಧರರೇಯೆ. ಎಲ್ಲರಲ್ಲಿಯೂ ಒಂದು ರೀತಿಯ ತೃಪ್ತಿ - 'ನಮಗೆ ಮೊದಲು ತಿಳಿಯದವರ ಬೇಕು ಬೇಡಗಳನ್ನು ತಿಳಿದು ಕೊಂಡು ಅವರಿಗೆ ಅನ್ನ, ಸಾರು, ಹುಳಿ, ಮಜ್ಜಿಗೆ, ಕಡೆಗೆ - ನೀರು ಬಡಿಸುವುದರಲ್ಲಿ ಒಂದು ರೀತಿಯ ಆನಂದ, ಒಂದು ಸಾರ್ಥಕತೆಯ ಭಾವ ಉಂಟಾಗುತ್ತದೆ' ಎಂಬುದು ಎಲ್ಲರ ಪರವಾಗಿ ವಾಸುದೇವನ್ ಹೇಳಿದ ಮಾತು.

ಹಿಂದೂಪುರದ ಎಂ.ಎ. ಗುಪ್ತ ಅವರು ವೈದ್ಯರು. ಹದಿನೇಳು ಮಂದಿಯ ಅವರ ತಂಡದಲ್ಲಿ ಒಬ್ಬ ಮಹಿಳೆಯೂ ಉಂಟು. ಅವರಿಗೆ ಅನ್ನದಾನದ ಕ್ಯಾಂಟೀನಿನಲ್ಲಿ ಬಡಿಸುವ ಅನುಭವ ಒಂದು ರೀತಿಯಲ್ಲಿ ಹೊಸದು. ಅಷ್ಟು ಮಂದಿಗೆ ಒಟ್ಟಿಗೆ ಬಡಿಸಿದ ಅನುಭವ ಇಲ್ಲ. (ಇರುವುದಾದರೂ ಹೇಗೆ - ಅಷ್ಟು ಮಂದಿ ಊಟಕ್ಕೆ ಒಟ್ಟಿಗೆ ಕೂಡುವುದೇ ಅಪರೂಪ) ಮತ್ತೆ ಮತ್ತೆ ಬಂದು ಭಕ್ತರ ಸೇವೆಯಲ್ಲಿ



ಭಾಗವಹಿಸುವ ಮನವಿದೆ. ದೇವರು ಅವಕಾಶ ಮಾಡಿಕೊಡಬೇಕಷ್ಟೆ.

ತರಕಾರಿ ಹೆಚ್ಚುವುದರಲ್ಲಿ ನಿರತರಾಗಿದ್ದ ವೆಂಕಟೇಶಪ್ಪ ಒಬ್ಬರೇ ಬಂದವರು. ಅವರ ಊರು ಗೂಡೂರು. ತಿರುಪತಿಗೆ ಹತ್ತಿರವೇ ಆದರೂ ಮನೆಯ ಪರಿಸ್ಥಿತಿ ಪದೇ ಪದೇ ಬರುವುದಕ್ಕೆ ಅವಕಾಶ ಕೊಡದು. ಸ್ವಾಮಿಯನ್ನು ನೋಡುವುದರೊಂದಿಗೆ ಸ್ವಾಮಿಯ ಭಕ್ತರ ಸೇವೆಯನ್ನು ಮಾಡುವ ಅವಕಾಶವೂ ಸಿಕ್ಕಿರುವುದು ಅವರಿಗೆ ಹೆಚ್ಚಿನ ಆನಂದವನ್ನು ತಂದುಕೊಟ್ಟಿದೆ. ಚಿಂತೆಗಳಿಂದ ದೂರವಾಗಿ ಸೇವೆಯಲ್ಲಿ ತೊಡಗುವುದರಿಂದ ಮನಸ್ಸಿಗೆ ನೆಮ್ಮದಿ ದೊರೆತಂತಾಗುತ್ತದೆ.

ತಿರುಪತಿಗೆ ಬರುವ ಯಾತ್ರಿಕ ಭಕ್ತರು ತಮ್ಮ ಯಾತ್ರೆಯ ದಿನ ನಿಶ್ಚಯವಾದ ಕೂಡಲೇ ತಿ.ತಿ.ದೇ. ಪೌರಸಂಬಂಧಾಧಿಕಾರಿಗಳಿಗೆ ಕಾಗದ ಬರೆದು ತಮ್ಮ ಶ್ರೀವಾರಿ ಸೇವೆಯನ್ನೂ ಖಚಿತ ಪಡಿಸಿಕೊಳ್ಳಬಹುದು. ಹೀಗೆ ಸೆಪ್ಟಂಬರ್ ತಿಂಗಳಿಗೆ ಶ್ರೀವಾರಿಸೇವೆಯನ್ನು ಮಾಡಬರುವ ನಾಲ್ಕು ನೂರು ಮಂದಿಯ ಪಟ್ಟಿ ಈಗಾಗಲೇ ಸಿದ್ಧವಾಗಿದ್ದು ಇದು ಬರುವ ದಿನಗಳಲ್ಲಿ ಬೆಳೆಯುವುದೆಂದು ನಿರೀಕ್ಷಿಸಲಾಗಿದೆ ಎಂಬುದು ಶ್ರೀವಾರಿಸೇವಾಸೆಲ್‌ನ ಅಧೀಕ್ಷಕರಾದ ನಾಗೇಶ್ವರರಾವ್ ಹೇಳುವ ಮಾತು. ಚೆನ್ನೈಯಿಂದ ವಾರಕ್ಕೆ ಒಮ್ಮೆ ಒಂದು ಹೊಸ ತಂಡ ಸೇವೆಗಾಗಿ ಬರುವುದು ಖಚಿತವಾಗಿದೆ. ಮೊದಲೇ ತಿಳಿಸಿಯೇ ಬರಬೇಕು ಎಂದೇನೂ ಇಲ್ಲ. ಭಕ್ತರು ಯಾವುದೇ ದಿನವೂ ಬೆಳಗ್ಗೆ 10.30 ರಿಂದ ಸಂಜೆ 5 ರ ವರೆಗೆ ತಿರುಮಲೆಯ ಕ್ಯಾಂಟಿನ್ ಕಾಂಪ್ಲೆಕ್ಸ್‌ನಲ್ಲಿರುವ ಶ್ರೀವಾರಿಸೇವೆಯ ಸೆಲ್‌ಗೆ ಬಂದು ತಮ್ಮ ಹೆಸರು ವಿಳಾಸಗಳನ್ನು ನೀಡಿ ಸೇವೆಯಲ್ಲಿ ತೊಡಗಬಹುದು ಎಂದು ಅವರು ಹೇಳುತ್ತಾರೆ. ಐದಕ್ಕಿಂತ ಹೆಚ್ಚು ಮಂದಿ ಹೆಚ್ಚು ದಿನಗಳು ಶ್ರೀವಾರಿ ಸೇವೆಯಲ್ಲಿ ಭಾಗವಹಿಸುವಂತಿದ್ದಲ್ಲಿ ಮೊದಲೇ ತಿಳಿಸುವುದು ಹೆಚ್ಚು ಅನುಕೂಲಕರ ಎಂದೂ ಸೇರಿಸುತ್ತಾರೆ.

ಶ್ರೀವಾರಿ ಸೇವೆಯಲ್ಲಿ ಭಾಗವಹಿಸುವುದರಿಂದ ತೃಪ್ತಿಯಂತೂ ಖಚಿತ ನಿಶ್ಚಿತ ಎಂಬುದು ಎಲ್ಲರ ಅಭಿಪ್ರಾಯ.

★★★★★

## ಶ್ರೀವಾರಿ ಸೇವೆಯಲ್ಲಿ ಭಾಗವಹಿಸಿದ ತಂಡಗಳು



ಯಾತ್ರಿಕರು ಸೇವಾಕ್ಷೇತ್ರ ನೊಂದಾವಣೆಯಲ್ಲಿ ನಿರತವಾಗಿರುವುದು.

| | | | |
|---|---|---|---|
| 1. | ಶ್ರೀವಾರಿ ಸೇವಾ ಸಮಿತಿ, ಚೆನ್ನೈ | 15 | ಮಂದಿ. |
| 2. | ಕೆ. ಎನ್. ರಾಮಚಂದ್ರನ್ ತಂಡ, ಬೆಂಗಳೂರು | 2 | ಮಂದಿ. |
| 3. | ಎಂ. ಜಿ. ಜನಾರ್ದನ್ ತಂಡ, ಮದುರೈ | 6 | ಮಂದಿ. |
| 4. | ಶ್ರೀನಿವಾಸರಾವು ತಂಡ, ಪ.ಗೋದಾವರಿ | 4 | ಮಂದಿ. |
| 5. | ಶ್ರೀವಾರಿಸೇವಾಸಮಿತಿ ಚೆನ್ನೈ | 23 | ಮಂದಿ. |
| 6. | ಝಾನ್ಸಿಲಕ್ಷ್ಮೀಬಾಯಿ ಮಹಿಳಾಸಂಘ, ಧರ್ಮವರಂ | 8 | ಮಂದಿ. |
| 7. | ಅನ್ನಮಯ್ಯ ಆಶ್ರಮಂ ಟ್ರಸ್ಟ್, ಸೇಲಂ | 112 | ಮಂದಿ. |
| 8. | ಶ್ರೀವಾರಿ ಸೇವಾಸಮಿತಿ, ಚೆನ್ನೈ | 32 | ಮಂದಿ. |
| 9. | ಶಾಂತಿ ಸೇವಾ ಸಮಿತಿ, ಗ್ಯಾಲಿ | 13 | ಮಂದಿ. |
| 10. | ಶ್ರೀಧರಮೂರ್ತಿ ತಂಡ, ಪಾವಗಡ | 10 | ಮಂದಿ. |
| 11. | ವೆಂಕಟೇಶ್ವರ್ಲು ತಂಡ, ಮಹಬೂಬಾಬಾದ್ | 9 | ಮಂದಿ. |
| 12. | ವೆಂಕಟೇಶ್ವರ್ಲು ತಂಡ, ಮಹಬೂಬ್ ನಗರ | 8 | ಮಂದಿ. |
| 13. | ಜ್ಯೋತಿಕುಮಾರ್ ತಂಡ, ಚೆನ್ನೈ | 3 | ಮಂದಿ. |
| 14. | ಶ್ರೀವಾರಿ ಸೇವಾಸಮಿತಿ, ಚೆನ್ನೈ | 27 | ಮಂದಿ. |
| 15. | ಅಯ್ಯಪ್ಪಸೇವಾ ಸಮಿತಿ, ನಂದ್ಯಾಲ | 18 | ಮಂದಿ. |
| 16. | ಡಾ॥ ಎಂ. ಎ. ಗುಪ್ತ, ಹಿಂದೂಪುರ | 17 | ಮಂದಿ. |
| 17. | ಶ್ರೀವಾರಿ ಸೇವಾಸಮಿತಿ ಚೆನ್ನೈ | 36 | ಮಂದಿ. |
| 18. | ಶ್ರೀನಿವಾಸ ಸೇವಾಸಮಿತಿ | 12 | ಮಂದಿ. |

★★★★★

# ವೇದಗಳ ವಿಷ್ಣು

- ಕಂದಾಡೈ ಕೇಶವನ್.

ವಿಷ್ಣು ಶಬ್ದಕ್ಕೆ ಅರ್ಥ ಮಾಡುವಾಗ ಹಿರಿಯರು ''ವ್ಯಾಪ್ಯ ಸರ್ವಾನ್ ಇಮಾನ್ ಲೋಕಾನ್ ಸ್ಥಿತಃ ಸರ್ವತ್ರ ಕೇಶವಃ ತತ್ವಶ್ಚ ವಿಷ್ಣುನಾಮಾನಿ ವಿಶೇರ್ಧಾತೋಃ ಪ್ರವೇಶ ನಾತ್'' ಕೇಶವನು ಎಲ್ಲಾ ಲೋಕಗಳಲ್ಲಿ ವ್ಯಾಪಿಸಿರುವನು. ವಿಶ್‌ಧಾತು ವಿನಂತೆ ವಿಷ್ಣು ಎಂದು ಹೆಸರುಳ್ಳವನು ವಿಶ್ ಪ್ರವೇಶನೇ ಎಂಬುದು ಮೂಲ ದಾತು. ಅದಕ್ಕೆ ಕೃನು ಪ್ರತ್ಯಯದಿಂದ ''ವಿಷ್ಣುಃ'' ಎಂದಾಗಿದೆ. ಋಗ್ವೇದ ಸಂಹಿತಾ ಮಂಡಲ 1 ಅನು ವಾಕ್ಕು 5 ಸೂತ್ರ 22 ರಲ್ಲಿ ಬರುವ ಮಂತ್ರ-

ಅತೋ ದೇವಾ ಅವಂತು ನೋ
ಯತೋ ವಿಷ್ಣುರ್ವಿಚ ಕ್ರಮೇ ।
ಪೃಥಿವ್ಯಾಃ ಸ ಪ್ತ ಧಾಮ ಭಿಃ ॥

ವಿಷ್ಣುವು ತ್ರಿವಿಕ್ರಮನಾಗಿ ತನ್ನ ಹೆಜ್ಜೆಗಳಿಂದ ಗಾಯತ್ರ್ಯಾದಿ ಏಳು ಛಂದಸ್ಸಿಗಳಿಂದ ಸಹಿತನಾಗಿ ಭೂಮಂಡಲವನ್ನು ಆಕ್ರಮಿಸಿ ಬೆಳೆದನೋ ಅಂತಹ ಭೂಮಿಯಲ್ಲಿರುವ ದೇವತೆಗಳು ನಮ್ಮನ್ನು ರಕ್ಷಿಸಲಿ. ಈ ಋಕ್ಕಿನಲ್ಲಿ ವಿಷ್ಣುವಿನ ವಿಷಯವು ಮೊದಲನೆಯದಾಗಿ ಉಲ್ಲೇಖಿಸ ಲಾಗಿದೆ. ಋಗ್ವೇದದಲ್ಲಿ ಅನೇಕ ಕಡೆ ಇತರ ದೇವತೆಗಳೊಡನೆ ವಿಷ್ಣುವಿನ ಹೆಸರು ಉಲ್ಲೇಖಿತವಾಗಿದೆ. ವಿಷ್ಣುವಿನ ಮಹಿಮೆಯನ್ನು ಮೂರು ಪದಗಳ ವಿನ್ಯಾಸದಿಂದ ಹೇಳುವಾಗ ಸ್ವರ್ಗ, ಭೂಮಿ, ಅಂತರಿಕ್ಷ ಪದಕ್ರಮಗಳಾಗಿವೆ. ಇದಲ್ಲದೆ ವಿಷ್ಣುವಿನ ಪರಮಪದವು ಅತಿಶ್ರೇಷ್ಠ ಸ್ಥಾನವಾಗಿದೆ. ಇಂದ್ರನು ವೃತ್ರಾಸುರನನ್ನು ಸಂಹರಿಸುವಾಗ ವಿಷ್ಣುವಿನ ಕೃಪೆ ಕೋರುತ್ತಾನೆ. ವಿಷ್ಣುವು ಸರ್ವಯಜ್ಞಗಳಿಗೆ, ಸರ್ವ ಪರ್ವತಗಳಿಗೆ ಅಧಿಪತಿ, ಯಜ್ಞಸ್ವರೂಪನು. ಈ ಋಕ್ಕಿನ ವಿಷ್ಣು ಶಬ್ದಕ್ಕೆ ಭಾಷ್ಯಕಾರರು ಪುರುಷೋತ್ತಮನೆಂದು ವ್ಯಾಖ್ಯಾನ ಮಾಡಿದ್ದಾರೆ.

ವಿಷ್ಣುಃ ಅಥ ಯದ್ವಿಷಿತೋ
ಭವತಿ ತದ್ವಿಷ್ಣುರ್ಭವತಿ ।
ವಿಷ್ಣುಃ ವಿಶತೇರ್ವಾ ವ್ಯಶ್ನೋ ತೇರ್ವಾ ॥

ಎಲ್ಲವನ್ನೂ ವ್ಯಾಪಿಸಿರುವುದರಿಂದ ಎಲ್ಲದರಲ್ಲಿ ತಾನು ಪ್ರವೇಶಿಸಿ ಸ್ಥಿತವಾಗಿರುವು ದರಿಂದ ಅಥವಾ ರಶ್ಮಿಗಳಿಂದ ತೇಜಸ್ಸಿನಿಂದ ಸರ್ವವನ್ನೂ ವ್ಯಾಪಿಸಿರುವುದರಿಂದ ವಿಷ್ಣುವೆಂದು ಹೆಸರು. ವಿಷ್ಣುವನ್ನು ಲೋಕಸಾಕ್ಷಿಯಾದ ಆದಿತ್ಯನೆಂದೂ ಹೇಳಬಹುದು.

ವಿಚಕ್ರಮೇ ಬಹು ಪ್ರಕಾರವಾಗಿ ಸೃಷ್ಟಿಯಲ್ಲಿ ವ್ಯಾಪಿಸಿರುವವನು. ಸಪ್ತಧಾಮಭಿಃ ಎಂದರೆ ಗಾಯತ್ರ್ಯಾದಿ ಸಪ್ತ ಛಂದಸ್ಸುಗಳು ಸಪ್ತರಶ್ಮಿಗಳ



ಸಹಾಯದಿಂದ ಪ್ರಪಂಚವನ್ನೇ ಪರಿಪಾಲಿಸು ವವನು ವಿಷ್ಣು. ಮುಂದಿನ ಋಗ್ವೇದ ಋಕ್ಕು

ಇದಂ ವಿಷ್ಣುರ್ವಿ ಚಕ್ರಮೇ
ತ್ರೇಧಾ ನಿದಧೇ ಪದಂ
ಸಮೂಳ್ಹಮಸ್ಯ ಪಾಂಸುರೇ

ವಿಷ್ಣುವು ತ್ರಿವಿಕ್ರಮನಾಗಿ ಸಮಸ್ತ ಜಗತ್ತನ್ನೂ ತನ್ನ ಮೂರು ಪಾದಗಳಿಂದ ಆಕ್ರಮಿಸಿಕೊಂಡ ಕಾರಣ, ವಿಷ್ಣುವಿನ ಪಾದದೂಳಿ ಯುಕ್ತವಾಗಿ ಈ ಜಗತ್ತೆಲ್ಲಾ ಮುಚ್ಚಿ ಹೋಯಿತು. ಮುಂದಿನ ಋಕ್ಕು-

ತ್ರೀಣಿ ಪದಾವಿ ಚಕ್ರಮೇ
ವಿಷ್ಣುರ್ಗೋಪಾ ಅದಾಭ್ಯಃ ।
ಅತೋ ಧರ್ಮಾಣಿ ಧಾರಯನ್ ॥

ವಿಷ್ಣುವನ್ನು ಹಿಂಸಿಸಲು (ಸೋಲಿಸಲು) ಯಾರಿಂದಲೂ ಶಕ್ಯವಿಲ್ಲ. ಕಾರಣ, ಆತ ಜಗತ್ತಿಗೆ ಕಾರಣ ಭೂತನು, ರಕ್ಷಕನು. ಆದ್ದರಿಂದಲೇ ಅಗ್ನಿ ಹೋತ್ರಾದಿ ಧರ್ಮಗಳ ಸಂರಕ್ಷಣೆಗಾಗಿ ವಿಷ್ಣು ಮೂರು ಪಾದ ವಿಕ್ಷೇಪವನ್ನು ಮಾಡಿದನು. ಗೋ ಎಂದರೆ ಭೂಮಿ ಅದನ್ನು ರಕ್ಷಿಸುವನು ಗೋಪಾಃ ವಿಷ್ಣುವಿಗೆ ಅನ್ವಯಿಸುತ್ತ - ಸರ್ವಸ್ಯಹಿ ಭಗವಾನ್ ವಿಷ್ಣುರಾಶ್ರಯಃ - ಎಂಬುವಂತೆ ವಿಷ್ಣುವು ಸಮಸ್ತ ಜಗತ್ತಿನ ಪಾಲಕನಾಗಿರುವುದರಿಂದ ಸಮಸ್ತ ಧರ್ಮಗಳಿಗೂ ಆಶ್ರಮನು, ಪಾಲಕನು. ಧರ್ಮಾಣಿ ಧಾರಯನ್ ಎಂಬುವುದರ ಅರ್ಥ ದುಷ್ಟ ಶಿಕ್ಷಣೆ. ಶಿಷ್ಟ ಪರಿಪಾಲನೆ ಅವನ ಗುಣ ವಿಶೇಷ. ಮುಂದಿನ ಸಂಹಿತಾ ಪಾಠ.

ವಿಷ್ಣೋಃ ಕರ್ಮಾಣಿ ಪಶ್ಯತ
ಯತೋ ವ್ರತಾನಿ ಪಸ್ಪಶೇ
ಇಂದ್ರಸ್ಯ ಯುಜ್ಯಃ ಸಖಾ

ಎಲೈ ಋತ್ವಿಕ್‌ಗಳೇ ನೋಡಿರಿ. ವಿಷ್ಣುವಿನ ಅದ್ಭುತ ಕರ್ಮಗಳನ್ನು ಆ ವಿಷ್ಣುವಿನ ಮಹಿಮೆಯಿಂದ ಯಜಮಾನನು ಯಜ್ಞ ಯಾಗಾದಿಗಳನ್ನು ಮಾಡಲು ಸಮರ್ಥನು. ಇಂತಹ ವಿಷ್ಣುವು ಇಂದ್ರನಿಗೆ ಪರಮಮಿತ್ರನು. ಭಾಷ್ಯಕಾರರಂತೆ ಈ ಋಕ್ಕಿನಲ್ಲಿ ಹೇಳಿರುವ ವಿಷ್ಣುವು ಮಾಡಿದ ಸಾಹಸ ಕಾರ್ಯಗಳು ಹಾಗೂ ಇಂದ್ರನಿಗೆ ಮಾಡಿದ ಸಹಾಯವನ್ನು ತೈತ್ತರೀಯ ಸಂಹಿತೆಯ (2-4-122) ಅನುವಾಕ್ಕಿನಲ್ಲಿ

ಉಲ್ಲೇಖಿತವಾಗಿದೆ. ಅದರ ಪ್ರಕಾರ ಪ್ರಜಾಪತಿಗೆ ವಿಶ್ವರೂಪನೆಂಬ ಪುತ್ರನಿದ್ದನು. ಅವನು ದೇವತೆಗಳಿಗೆ ಪುರೋಹಿತನಾಗಿದ್ದರೂ ಅಸುರರ ಪಕ್ಷಪಾತಿ. ಯಜ್ಞದ ಒಂದು ಭಾಗವನ್ನು ಅಸುರರಿಗೂ ಕೊಡಬೇಕೆಂದು ವಾದಿಸುತ್ತಿದ್ದನು. ಇದನ್ನು ತಿಳಿದ ಇಂದ್ರನು ವಿಶ್ವರೂಪನನ್ನು ಸಂಹಾರ ಮಾಡಿದನು. ಕುಪಿತಗೊಂಡ ತ್ವಷ್ಟ ಪ್ರಜಾಪತಿ ಇಂದ್ರನಿಗೆ ಶಾಪಕೊಟ್ಟಾಗ ವಿಷ್ಣುವು ಇಂದ್ರನನ್ನು ರಕ್ಷಿಸಿದ ಪ್ರಸಂಗ ಇಲ್ಲಿದೆ. ಋಗ್ವೇದದ ವಿಷ್ಣುಸೂಕ್ತದಲ್ಲಿ ವಿಷ್ಣುವು ಸರ್ವೋತ್ಕೃಷ್ಟನು ಅವನ ಮಹಿಮೆಯನ್ನು ಯಾರೂ ಅರಿಯಲಾರರು. ಎಂಬುವುದಾಗಿ ಹೇಳಿದೆ. ''ನತೇ ಮಹಿತ್ವಂ ಅನ್ವಶ್ನುವಂತಿ'' ಇನ್ನು ಮುಂದೆ ಏಕೋ ನಾರಾಯಣ ಆಸೀತ್ ನ ಬ್ರಹ್ಮಾ ಇತ್ಯಾದಿ. ವಿಷ್ಣುವನ್ನು ಮಂಗಳಕ್ಕೋಸ್ಕರ ಪೂಜಿಸಬೇಕೆಂದು ವೇದಗಳು ಘೋಷಿಸುತ್ತವೆ. ಕಾರಣ ವಿಷ್ಣುವು ಯಜ್ಞಸ್ವರೂಪನೆಂದು ಯಜ್ಞೋ ವೈ ವಿಷ್ಣುಃ ಭಗವಂತನು ಸಕಲ ಶಬ್ದವಾಚ್ಯನೆಂದು ಹೇಳುವಾಗ ಸರ್ವೇವೇದಾ ಯತ್ಪದ ಮಾಮನಂತಿ ಸಕಲ ವೇದಗಳೂ ವಿಷ್ಣು ಪರವಾಗಿಯೇ ಇವೆ.

**ತೈತ್ತರೀಯ ಸಂಹಿತೆ :**

ತೈತ್ತರೀಯ ಸಂಹಿತೆಯ ಐದನೆಯ ಕಾಂಡದ ಎರಡನೆಯ ಪ್ರಶ್ನೆಗೆ ಸಾಯಣಾಚಾರ್ಯರು ವ್ಯಾಖ್ಯಾನ ಮಾಡುವಾಗ ದೇವಾಃ ಪೂರ್ವಂ ಸ್ವೇಷು ವಿಷ್ಣುಮೇವ ಮುಖ್ಯಂ ಕೃತ್ವಾ ಛಂದೋಭಿಮಾನಿ ದೈವೈಃ ಸಹಿತಾಃ ಅನಪಜಯ್ಯಂ ಅನ್ಯೈ ರ್ಜೇತುಂ ಯಥಾ ನ ಶಕ್ಯತೇ ತಥಾ ಇಮಾನ್ ಲೋಕಾನ್ ಅಭ್ಯಜಯನ್ - ಪೂರ್ವದಲ್ಲಿ ದೇವತೆಗಳು ವಿಷ್ಣುವನ್ನು ಮುಂದೆ ಮಾಡಿಕೊಂಡು ಛಂದೋಭಿಮಾನಿಗಳಾದ ದೇವತೆಗಳೊಡನೆ ಕೂಡಿ ಈ ವಿಶ್ವವನ್ನು ಬೇರೆ ಯಾರೂ ಅಪಹರಿಸದ ಹಾಗೆ ಗೆದ್ದುಕೊಂಡು ತಮ್ಮ ಸ್ವಂತವನ್ನಾಗಿ ಮಾಡಿಕೊಂಡರು ಎಂಬುವುದಾಗಿ ಹೇಳಲಾಗಿದೆ. ಈ ಪ್ರಕರಣ ವಾಮನ ಅವತಾರ ತ್ರಿವಿಕ್ರಮವತಾರಕ್ಕೆ ಸಂಬಂಧ ಪಟ್ಟದ್ದು. ಬಲಿ ಚಕ್ರವರ್ತಿಯಿಂದ ವಿಶ್ವವನ್ನೇ ಆಕ್ರಮಿಸಿಕೊಂಡ ಅದ್ಭುತ ಭಗವತ್ ಲೀಲಾಮೃತ. ತೈತ್ತರೀಯ ಸಂಹಿತೆಯಲ್ಲಿ ಬ್ರಾಹ್ಮಣರು ಯಜ್ಞವನ್ನು ಮಾಡಿದರೆ ವಿಷ್ಣುವಿನಂತೆ ಸಮಸ್ತವನ್ನೂ ಗೆಲ್ಲಬಲ್ಲರು ಎಂಬುವ ಸೂಚನೆ ನೀಡುವಾಗ ಗಾಯತ್ರಿಯೇ ಭೂಮಿ. ತ್ರಿಷ್ಟುಪ್ಪು ಆಕಾಶ, ಅಂತರಿಕ್ಷ ಜಗತೀ ದೇವಲೋಕ. ಅನುಷ್ಟುಪ್ ದಶದಿಕ್ಕುಗಳು, ಯಜ್ಞದೀಕ್ಷಿತ ಯಜಮಾನನಿಗೆ ಅಧೀನ ವಾಮನನು ಗಾಯತ್ರಿಯನ್ನು ಜಪಿಸುತ್ತಾ ಹೋಗಲು ಒಂದು ಪಾದ ಭೂಮಿಯನ್ನು ಆವರಿಸಿತು. ಜಗತೀ ಛಂದಸ್ಸಿನ ಮಂತ್ರ ಪಠನದಿಂದ ದೇವಲೋಕವನ್ನು ತಲಪಿ ಅದನ್ನು ಆವರಿಸಿತು. ತ್ರಿಷ್ಟುಪ್ ಮಂತ್ರ ಪಠನದಿಂದ ಅಂತರಿಕ್ಷವನ್ನು ವ್ಯಾಪಿಸಿತು. ಅನುಷ್ಟುಪ್ ಮಂತ್ರಗಳಿಂದ ಎಲ್ಲಾ ದಿಕ್ಕುಗಳನ್ನು ಆವರಿಸಿತು ಭಗವಂತನ ದಿವ್ಯ ಪಾದ. ''ಗಾಯತ್ರೀ ವೈ ಪೃಥಿವೀ ತ್ರೈಷ್ಟುಭ ಮಂತರಿಕ್ಷಂ ಜಾಗತೀದ್ಯೌಃ, ಅನುಷ್ಟುಭಿರ್ದಿಶಾಂ ಛಂದೋಭಿರೇವ ಇಮಾನ್ ಲೋಕಾನ್ ಯಥಾ ಪೂರ್ವಂ ಅಭಿಜಯಂತಿ'' - ದೇವರನ್ನೇ ಬೆಳೆಸಿದ ಗಾಯತ್ರೀ ವೇದಮಂತ್ರ ಜಗತ್ತಿಗೆ ಒಂದು ಒಳ್ಳೆಯ ಶಕ್ತಿಯನ್ನು ನೀಡುವ ದಿವ್ಯಮಂತ್ರ. ವಿಷ್ಣುವು ಬಲವನ್ನು ವರ್ಧಿಸುವ ದೇವರು. ಬಲಂ ವಿಷ್ಣೋಃ ಪುವರ್ದತಾಂ ಪ್ರಮಾಣ, ಶತಪಥ ಬ್ರಾಹ್ಮಣದ - ಯಜ್ಞೋ ವೈ ವಿಷ್ಣುಃ। ಸದೇವೇಭ್ಯಂ ಇಮಾಂ ವಿಕ್ರಾಂತಿಂ ವಿಚಕ್ರಮೇ - ಇಮೇ ವೈ ಲೋಕಾಃ ವಿಷ್ಣೋಃ ವಿಕ್ರಮಣಂ ವಿಷ್ಣೋಃ ವಿಕ್ರಾಂತಂ ವಿಷ್ಣೋ ಕ್ರಾಂತಂ ಎಂಬುವುದಾಗಿ ಈ ಲೋಕಗಳೆಲ್ಲಾ ಪರಮಾತ್ಮನಾದ ವಿಷ್ಣುವಿನಿಂದ ಗೆಲ್ಲಲ್ಪಟ್ಟು ಅವನಿಂದ ಆಕ್ರಮಿಸಲ್ಪಟ್ಟಿವೆ ಎಂಬುವುದಾಗಿ ಘೋಷಿಸಿವೆ. ಸೂರ್ಯ ಭಗವಾನ್‌ನನ್ನು ವಿಷ್ಣುವೆಂದು ನಿರುಕ್ತವು ಘೋಷಿಸುತ್ತೆ. ಅವನು ಜಗತ್ ಚಕ್ಷು. ಜಗತ್ ಸಾಕ್ಷೀ ಜಗತ್ ಪಾಲಕನೆಂದು ಹೇಳಲಾಗಿದೆ.

ವಿಷ್ಣುಃ ಯದ್ವಿಷಿತೋ ಭವತಿ
ತದ್ವಿಷ್ಣುರ್ಭವತಿ ವಿಷ್ಣುಂ
ವಿಶತೇರ್ವಾ ವ್ಯಶ್ನೋ ತೇರ್ವಾಃ

ಪರಮಾತ್ಮನು ಎಲ್ಲವನ್ನೂ ವ್ಯಾಪಿಸಿರುವು ದರಿಂದ ಎಲ್ಲವನ್ನೂ ಪ್ರವೇಶಿಸಿ ತನ್ನ ರಶ್ಮಿಗಳಿಂದ ವ್ಯಾಪಿಸಿರುವುದರಿಂದ ವಿಷ್ಣುವು ಸೂರ್ಯನೇ ಹೌದು. ವಿಷ್ಣುವು ಮೂರು ಪಾದಗಳನ್ನು ಇಟ್ಟ ಪ್ರಸಂಗವನ್ನೇ ಸೂರ್ಯಭಗವಾನನಿಗೆ ಅನ್ವಯಿಸುವಾಗ 'ಸಮಾರೋಹಣೇ, ವಿಷ್ಣು ಪದೇ, ಗಯ ಶಿರಸಿ ಇತ್ಯೌರ್ಣನಾಭಃ ಎಂಬುವುದಾಗಿ ಉದಯಸೂರ್ಯನು ಉದಯಾಚಲದಲ್ಲಿ ಒಂದು ಪಾದವನ್ನೂ ಮಧ್ಯಾಹ್ನದಲ್ಲಿ ವಿಷ್ಣುಪದವೆಂಬ ಅಂತರಿಕ್ಷದಲ್ಲಿ ಎರಡನೆಯ ಪಾದವನ್ನೂ ಸಂಜೆ ಮುಳುಗುವಾಗ ಶಿರಸ್ಸಿನಲ್ಲಿ ಮೂರನೆಯ ಪಾದವನ್ನೂ ಇಡುತ್ತಾನೆಂಬ ಸದೃಶ ವಾಕ್ಯು. ಶತ ಪಥ ಬ್ರಾಹ್ಮಣದ ತ್ರಿವಿಕ್ರಮನ ಪಾದ ವೈಭವ ಅದ್ಭುತವಾದುದು ರಂಜನೀಯವಾದುದು. ಇಲ್ಲಿ ತ್ರಿವಿಕ್ರಮ ಅವತಾರದ ವೇದ ಮಂತ್ರಗಳಾದ ಅತೋದೇವಾ ಅವಂತುನೋ - ತದ್ವಿಪ್ರಾಸೋ - ಇದಂ ವಿಷ್ಣುಂ - ತ್ರೀಣಿಪದಾ - ವಿಷ್ಣೋಃ ಕರ್ಮಾಣಿ - ಈ ವೇದಮಂತ್ರಗಳನ್ನು ಯಾರು ಜಪಿಸುತ್ತಾರೋ ಅವರು ವಿಷ್ಣುಲೋಕ ಸೇನಾನಿಯೊಡನೆ (ವಿಷ್ವಕ್ಸೇನ) ವಿಷ್ಣು ಲೋಕವನ್ನು ಪಡೆಯುತ್ತಾರೆ. ಎಂಬುವುದಾಗಿ ಮಂತ್ರಗಳ ಮಹಿಮೆಯನ್ನು ನಮ್ಮ ಋಷಿಗಳು ಕೊಂಡಾಡಿದ್ದಾರೆ. ಪರಮ ಪದವು ಶ್ರೀ ವೈಕುಂಠಕ್ಕೆ ಮಾತ್ರ ಸೀಮಿತ. ವಿಷ್ಣೋಃ ಪದೇ ಪರಮೇ ಎಂಬುವುದು ಅವನ ಪಾರಮ್ಯತೆಗೆ ಪೋಷಕ. ಅವನ ಸಕಲ ಬಂಧು. ನ ಚ ಪುನರಾವರ್ತತ ಇತಿ ಶ್ರುತೇಃ ತಸ್ಯ ಬಂಧುತ್ವಂ ವಿಷ್ಣುವಿಗಿಂತ ಅವನ ಲೋಕಕ್ಕಿಂತ ಹಿರಿಯದು ಯಾವುದೂ ಇಲ್ಲ. ಪರಮಪದವು ಉತ್ಕೃಷ್ಟ ವಾದುದು. ವಿಷ್ಣುವು ಏಕಕಾಲದಲ್ಲಿ ಪ್ರತಿಯೊಂದನ್ನೂ ನೋಡಬಲ್ಲನಾದ್ದರಿಂದ ವೇದಗಳು ಅವನನ್ನು ಸರ್ವಸ್ವ ವಾದ್ರಷ್ಟುಃ -ಯತಿ ಸರ್ವಜ್ಞಃ ಸರ್ವವಿತ್ ಎಂಬುವುದಾಗಿ ಮುಂಡಕೋಪನಿಷತ್ ವರ್ಣಿಸಿದೆ. ವಿಷ್ಣುವಿನ ಎರಡು ಪಾದಗಳನ್ನಿಟ್ಟ ಭೂಲೋಕ ಅಂತರಿಕ್ಷ ಗಳನ್ನು ಮಾನವರು ನೋಡಬಲ್ಲರು. ಆದರೆ ಆತನ ಮೂರನೆಯಪಾದದ ಸ್ಥಾನವನ್ನು ಇದುವರೆಗೂ ಮರುತ್ತುಗಳಾಗಲಿ, ಋಷಿ ಗಳಾಗಲಿ ಯಾವ ದ್ರಷ್ಟರಾಗಲಿ ಕಾಣುವುದಕ್ಕೆ ಆಗಿಲ್ಲ. ವಿಷ್ಣುವಿನೊಬ್ಬನಿಗೆ ಮಾತ್ರ ಸಾಧ್ಯ ಎಂಬುವುದಾಗಿ ಶ್ರುತಿಗಳು ಸಾರಿವೆ. ಏಕೆಂದರೆ ಅವನು ಕಾಲಾತೀತ, ಕಾಲಕ್ಕೆ ಒಡೆಯ. ಅವನ

ಆಜ್ಞೆಯಂತೆ ಋತುಗಳ ಪರಿಭ್ರಮಣ. ತ್ರಿಕಾಲಜ್ಞ, ಸರ್ವಜ್ಞ, ಸರ್ವಸ್ವಾಮಿ, ಸರ್ವೇಶ್ವರ.

ಯಃ ಪೂರ್ವಾಯ ವೇಧಸೆ

ಕೃಷ್ಣ ಯಜುರ್ವೇದದ ಬ್ರಾಹ್ಮಣ 11-4 ರ ಮಂತ್ರವನ್ನು ಶುಭಕಾರ್ಯಗಳಲ್ಲಿ ಭಗವಂತನಿಗೆ ಸಂಭಾವನೆಯನ್ನು ನೀಡುವಾಗ ಎಲ್ಲಾ ಸಾತ್ವಿಕರು ಪಠಿಸುವ ಸಕಲ ವೇದಗಳ ಸಾರಭೂತವಾದ ಶ್ರೇಯಸ್ಸನ್ನು ನೀಡುವ ಮಂತ್ರ-

ಯಃ ಪೂರ್ವಾಯ ವೇಧಸೇ
ನವೀಯ ಸೇ ಸುಮಜ್ಞಾನಯೇ
ವಿಷ್ಣವೇ ದದಾಶತಿ
ಯೋ ಜಾತಮಸ್ಯ ಮಹತೋ
ಮಹಿ ಬ್ರವತ್ಸೇದು
ಶ್ರವೋಭಿರ್ಯುಜ್ಯಂ ಚಿದಭ್ಯಸತ್

ಯಾವ ಪುರುಷನು ಪುರಾಣಪುರುಷನೂ ಅನಾದಿಯೂ, ಜಗತ್ ಸೃಷ್ಟಿ ಕರ್ತನೂ, ನಿತ್ಯ ನೂತನನೂ ರಂಜನೀಯನೂ ಲಕ್ಷ್ಮೀಪತಿಯಾದ ವಿಷ್ಣುವಿನಲ್ಲಿ ಶರಣಾಗತನಾದರೆ, ಅಂತಹ ಕಲ್ಯಾಣ ಗುಣ ಪೂರ್ಣನಾದ ಭಗವಂತನ ಅವತಾರ ವಿಶೇಷಗಳನ್ನು ಸ್ಮರಿಸಿ ಗುಣಕೀರ್ತನೆ ಮಾಡಿದರೆ ಬಹು ಕೀರ್ತಿವಂತನಾಗಿ ಎಲ್ಲರೂ ಹೋಗಿ ಸೇರುವ ಪರಮ ಪದವನ್ನು ಸೇರುತ್ತಾನೆ. ಎಂದು. ಆದ್ದರಿಂದಲೇ ವಿಷ್ಣುವನ್ನು ನಿತ್ಯಾಯ ನಿರವದ್ಯಾಯ, ಸತ್ಯಾನಂದ ಚಿದಾತ್ಮನೇ ಎಂದು ಹೊಗಳುವುದು. ನಿತ್ಯೋನಿತ್ಯಾನಾಂ - ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ-ಇದೇ ಅರ್ಥ. ವೇದದ 'ಯಮೇವೈಷ ವೃಣುತೇ ತೇನ ಲಭ್ಯಃ' - ಎಂಬುವುದರ ಅರ್ಥ. ಮಾನವರು ಐಹಿಕ ಸಾರ ಲೌಕಿಕ ಕ್ಷೇಮಗಳನ್ನು ಹೊಂದಬೇಕಾದರೆ ಸರ್ವೇಶ್ವರನಾದ ವಿಷ್ಣುವಿನಿಂದ ಮಾತ್ರ ಎಂಬುವುದಾಗಿ ಸಾರುತ್ತದೆ. ಯಜುರ್ವೇದವು ನಾರಾಯಣ ಪರಂ ಬ್ರಹ್ಮ. ತತ್ವಂ ನಾರಾಯಣ ಪರಃ - ಎಂಬುವುದಾಗಿ ಅವನನ್ನು ಪೂರ್ಣವಾಗಿ ಸ್ತುತಿಸಿದೆ. ಬೃಹದಾರಣ್ಯಾಕ ಉಪನಿಷತ್ ವಿಷ್ಣುವಿನ ಮಹಿಮೆಯನ್ನು ವರ್ಣಿಸಲು ಸಾಧ್ಯವಿಲ್ಲವೆಂದು ನೇತಿ ನೇತಿ ಎಂಬುವುದಾಗಿ ಸಾರುತ್ತದೆ.

ಲೋಕ ಹಿತಕ್ಕಾಗಿ ಆಪತ್ಕಾಲಗಳಲ್ಲಿ ದೇವ ಮಾನವರ ರಕ್ಷಣೆಗಾಗಿ ವಿಷ್ಣುವು ದಶಾವತಾರಗಳನ್ನು ಎತ್ತಿರುವ ವಿಷಯ ಸರ್ವವಿಧಿತ, ವಿಷ್ಣುವನ್ನು ಲಕ್ಷ್ಮಿಸಮೇತ ಸ್ತುತಿಸುವ ವೇದಮಂತ್ರ -

ತ್ವಂ ವಿಷ್ಣೋ ಸುಮತಿಂ
ವಿಶ್ವ ಜನ್ಯಾಮಪ್ರಯುತಾಮೇವ
ಯಾವೋಮತಿಂ ದಾಃ
ಪರ್ಚೋ ಯಥಾ ನಃ
ಸುವಿತಸ್ಯ ಭೂರೇವಶ್ವಾವತಃ
ಪುರಶ್ಚಂದ್ರಸ್ಯ ರಾಯಃ

ಎಲ್ಲರ ಆಸೆಗಳನ್ನು ತೀರಿಸುವ ಜೀವಿಗಳ ಹಿತನೂ ದೋಷವಿಲ್ಲದ ಸನ್ಮತಿಯನ್ನು ಎಲೈ ಲಕ್ಷ್ಮೀ ಧರನಾದ ವಿಷ್ಣುವೇ ನಮಗೆ ಅನುಗ್ರಹ ಮಾಡು. ವಿಷ್ಣು ಸಹಸ್ರನಾಮದಲ್ಲಿ ಎಲ್ಲಾ ನಾಮಗಳು ಋಷಿಗಳಿಂದ ಪರಿಗೀತವಾಗಿ ವೇದಗಳಿಂದ ಆರಿಸಲ್ಪಟ್ಟು ಅದರ ಮಹಿಮೆಯನ್ನು ಕಂಡುಕೊಂಡ ಮಂತ್ರ ದ್ರಷ್ಟಾರರಿಂದ ಸ್ತುತಿಸಲ್ಪಟ್ಟ ನಾಮಗಳೇ-

ಯಾನಿ ಗೌಣಾನಿ ನಾಮಾನಿ
ವಿಖ್ಯಾತಾನಿ ಮಹಾತ್ಮನಃ
ಋಷಿಭಿಃ ಪರಿಗೀತಾನಿ
ತಾನಿ ವಕ್ಷ್ಯಾಮಿ ಭೂತಯೇ

ವಿಷ್ಣುವು ದೇವಮಾನವರ ಹಿತಕ್ಕಾಗಿ ಅಸುರರಿಂದ ಭೂಮಿಯನ್ನು ಬಿಡಿಸಿಕೊಂಡು ತ್ರಿವಿಕ್ರಮನಾಗಿ ಭೂಮಿಯನ್ನು ಆವರಿಸಿದನು. ಅಂತಹ ವಿಷ್ಣುವನ್ನು ಕೊಂಡಾಡುವವರು ಲೋಕದಲ್ಲಿ ಸುಖವಾಗಿರುತ್ತಾರೆ. ಅವತಾರಗಳೆನ್ನೆತ್ತುವುದೂ ಲೋಕದ ಹಿತಕ್ಕಾಗಿ. ಅವನನ್ನು ಸಂಕೀರ್ತನೆ ಮಾಡಿದರೆ ಅವನಿಗೂ ರಕ್ಷೆ-

ವಿ ಚಕ್ರಮೇ ಪೃಥಿವೀಮೇಷ ಏತಾಂ

ಎಂಬುವುದರ ಅರ್ಥವೂ ಇದೇ ಆಗಿದೆ. ವೇದಗಳಲ್ಲಿ ಅನೇಕ ಕಡೆ ವಾಮನ ತ್ರಿವಿಕ್ರಮ ಅವತಾರಗಳಿಗೆ ಬಹಳ ಪ್ರಶಸ್ತಿ ಕೊಟ್ಟಿದ್ದಾರೆ.. ಆದ್ದರಿಂದಲೇ ಎಲ್ಲಾ ಆಳ್ವಾರರು, ಆಚಾರ್ಯರು, ಆಂಡಾಳ್ ಸಹ ತ್ರಿವಿಕ್ರಮನ ಅವತಾರವನ್ನು ಕೊಂಡಾಡಿದ್ದಾರೆ. ಋಗ್ವೇದ ಸಂಹಿತೆ 7-99-7 ರಲ್ಲಿ ಬರುವ ಮಂತ್ರ-

ವಷಟ್ತೇ ವಿಷ್ಣುವಾಸ ಆ ಕೃಣೋಮಿ
ತನ್ಮೋ ಜುಷಸ್ವ ಶಿಪಿವಿಷ್ಟಹವ್ಯಂ
ವರ್ಧನ್ತುತ್ವಾ ಸುಷ್ಟುತಯೋ
ಗಿರೋಮೇ ಯೂಯಂಪಾತ
ಸ್ವಸ್ತಿಭಿಃ ಸದಾನಃ

ಎಲೈ ವಿಷ್ಣುವೇ, ವಷಟ್ಕಾರ ಪೂರ್ವಕವಾಗಿ ನಿನ್ನನ್ನು ನುತಿಸಿ ನಿನಗೆ ಹವ್ಯವನ್ನು ನೀಡುತ್ತೇನೆ. ಕಮನೀಯ ಶರೀರವುಳ್ಳ ಉತ್ತಮ; ನನ್ನ ಸ್ತುತಿ ನಿನ್ನನ್ನು ಬೆಳಸಲಿ. ನೀನೂ ನಿನ್ನ ಪರಿವಾರ ವರ್ಗದವರು ನಮಗೆ ಸದಾ ಶ್ರೇಯಸ್ಸನ್ನು ನೀಡಿ ಸಂರಕ್ಷಿಸಿ. ವಿಷ್ಣು ಸ್ತುತಿ ಪ್ರಿಯನೂ ಹೌದು ಅಲಂಕಾರಪ್ರಿಯನೂ ಹೌದು. ಭಕ್ತರ ಸ್ತುತಿಗಳೇ ಅವನಿಗೆ ರಕ್ಷೆ. ಶ್ರೀವೈಷ್ಣವರೆಲ್ಲರೂ ದಿನವೂ ಪಠಿಸುವ ಪಲ್ಲಾಂಡು ಪಲ್ಲಾಂಡು ಪಾಶುರವೂ, ಮತ್ತು-

ಏವಮೇತತ್ ಪುರಾವೃತ್ತ
ಮಾಖ್ಯಾತಂ ಭದ್ರ ಮಸ್ತುವಃ
ಪ್ರವಾಹರತ ವಿಸ್ರಬ್ಧಿಂ
ಬಲಂ ವಿಷ್ಣೋಃ ಪ್ರವರ್ಧತಾಂ

ಎಂಬುವುದರ ಅರ್ಥ ಸ್ತುತಿಯಿಂದ ವಿಷ್ಣುವಿನ ಬಲ ಹೆಚ್ಚಾಗುತ್ತೆ. ವೇದದ ವಿಷ್ಣುವಿನ ಕಲ್ಪನೆ ಅಮೋಘವಾದುದು. ಜನರಹಿತಕ್ಕಾಗಿ ಋಷಿಗಳು ಕೊಟ್ಟ ದಿವ್ಯಮಂತ್ರಗಳು. ಪುರುಷಸೂಕ್ತ ನಾರಾಯಣ ಸೂಕ್ತ, ನಾರಾಯಣ ಮಹೋಪ ನಿಷತ್‌ಗಳು ವಿಷ್ಣುವಿನ ಅಪಾರ ಮಹಿಮೆಯನ್ನು ಕೊಂಡಾಡುತ್ತವೆ. ತೈತ್ತರೀಯ ಅರಣ್ಯಕದಲ್ಲ ದ್ಯಾವಾ ಪೃಥಿವಿಗಳನ್ನು ಧರಿಸಿರು ವವನು ವಿಷ್ಣುವು ಮಾತ್ರ ಭೂಮಿ ಅಂತರಿಕ್ಷಗಳು ನಕ್ಷತ್ರಗಳು ಗ್ರಹಗಳು ತಮ್ಮ ತಮ್ಮ ಗುರುತ್ವಾಕರ್ಷಣೆಗಳಿಂದ ನಿಂತಿರುವುದು ವಿಷ್ಣುವಿನ ಅಪಾರ ಶಕ್ತಿ ಮಹಿಮೆ ಯಿಂದಲೇ. ಅವನು ಸರ್ವವ್ಯಾಪಿ, ಸರ್ವಶಕ್ತ, ಸರ್ವಾಂತರ್ಯಾಮಿ. ಸರ್ವ ಚರಾಚರ ವಸ್ತುಗಳಲ್ಲೂ ಇದ್ದಾನೆ. ಅಂತರ್ಬಹಿಶ್ಚ ತತ್ ಸರ್ವಂವ್ಯಾಪ್ಯ ನಾರಾಯಣಸ್ಥಿತಃ, ಪದವಿ-ಐಶ್ವರ್ಯ ಕೀರ್ತಿ ಸುಖ ಮೋಕ್ಷಗಳನ್ನು ನೀಡುವವನು ವಿಷ್ಣುವೇ ಆಗಿರುವುದರಿಂದ ನಮ್ಮ ಹಿರಿಯರು ಸಂಪ್ರಾಪ್ತಃ ಸಕಲ ಫಲಪ್ರದೋ ಹಿ ವಿಷ್ಣುಃ - ಎಂಬುವುದಾಗಿ ಘೋಷಿಸಿದರು. ಸರ್ವಂ ವಿಷ್ಣುಮಯಂ ಜಗತ್.

★★★★★

# ಸಪ್ತಗಿರಿ

## ಓದುಗರಲ್ಲಿ, ಏಜಂಟರಲ್ಲಿ ವಿನಂತಿ.

ಮೂವತ್ತೆರಡನೆಯ ವರ್ಷದಲ್ಲಿ ಕಾಲಿಟ್ಟು ನಡೆಯುತ್ತಿರುವ ಸಪ್ತಗಿರಿ ಮಾಸ ಪತ್ರಿಕೆಯ ಮುದ್ರಣ ವೆಚ್ಚಗಳ, ಕಾಗದ ಇಂಕುಗಳ ಬೆಲೆಯ, ಹೆಚ್ಚಳದಿಂದಾಗಿ ಪತ್ರಿಕೆಯ ಬೆಲೆಯನ್ನು ಒಂದು ರೂಪಾಯಿ ಹೆಚ್ಚು ಮಾಡಲಾಗಿದೆ. 2001 ರ ಸೆಪ್ಟಂಬರ್ ಸಂಚಿಕೆಯಿಂದ ಈ ಪರಿಷ್ಕೃತ ದರ ಜಾರಿಗೆ ಬಂದಿದೆ.

ಏಜಂಟರು ತಮ್ಮ ಅಗತ್ಯಕ್ಕೆ ತಕ್ಕಂತೆ ಶೇವಣಿಯನ್ನು ಹೆಚ್ಚಿಸಬೇಕಾಗಿದೆ. ಈ ಶೇವಣಿ ಏರಿಕೆಯನ್ನು ಕೂಡಲೇ ಕೈಗೊಂಡು ಸಪ್ತಗಿರಿ ಪತ್ರಿಕೆಯ ಬೇಡಿಕೆ - ನೀಡಿಕೆ - ಯನ್ನು ಕಾಯ್ದುಕೊಳ್ಳಬೇಕು ಎಂದು ವಿನಂತಿಸಲಾಗಿದೆ.

ಈಗಾಗಲೇ ಚಂದಾದಾರರಾಗಿರುವವರಿಗೆ ಅವರ ಚಂದಾ ಅವಧಿ ಮುಗಿಯುವವರೆಗೆ ಹಳೆಯ ದರಗಳನ್ನೇ ಅನ್ವಯಿಸಲಾಗುವುದಾದರೂ, ಹೊಸಚಂದಾ ಆಗಲೀ, ಹಳೆಯ ಚಂದಾದಾರರ ಮುಂದುವರಿಕೆಯಾಗಲೀ - ಹೊಸ ದರಗಳಲ್ಲಿ ಆಗಬೇಕು. ಆದ್ದರಿಂದ ಚಂದಾ ಮುಂದುವರಿಕೆಗೆ ಅಥವಾ ಹೊಸದಾಗಿ ಚಂದಾದಾರರಾಗಬಯಸುವವರು ವಾರ್ಷಿಕ ಚಂದಾ ಹಣ ರೂ. 60/- ಗಳನ್ನು (ಅರವತ್ತು ರೂಪಾಯಿ ಮಾತ್ರ) ಕಳುಹಿಸಬೇಕೆಂದು ವಿನಂತಿಸಲಾಗಿದೆ.

ಹೊಸದಾಗಿ ಪ್ರವೇಶಗೊಳಿಸಲಾಗಿರುವ ಆಜೀವ ಚಂದಾ ದರವನ್ನು ರೂ. 500/- ಕ್ಕೆ (ಐದು ನೂರು ರೂಪಾಯಿಗಳು ಮಾತ್ರ) ನಿಗಧಿ ಗೊಳಿಸಲಾಗಿದೆ. ಹೆಚ್ಚುಮಂದಿ ಆ ಜೀವ ಚಂದಾದಾರರಾಗಿ ಸಪ್ತಗಿರಿಯ ಲಾಭ ಪಡೆಯಬೇಕೆಂದು ಆಶಿಸಲಾಗಿದೆ.

**ಈಗ ಜಾರಿಯಲ್ಲಿರುವ ದರಗಳು ಹೀಗಿವೆ -**

★ ಬಿಡಿ ಪ್ರತಿ **ರೂ. 5/-**

★ ವಾರ್ಷಿಕ ಚಂದಾ **ರೂ. 60/-**

★ ಆಜೀವ ಚಂದಾ **ರೂ. 500/-**

ತಮ್ಮ ಚಂದಾ ಹಣದ ಎಂ.ಓ., ಡಿ.ಡಿ. ಕಳುಹಿಸಬೇಕಾದ ವಿಳಾಸ,

**- ಸಂಪಾದಕರು,** ಸಪ್ತಗಿರಿ, ತಿ.ತಿ.ದೇ. ಪ್ರೆಸ್ ಕಾಂಪೌಂಡ್, ತಿರುಪತಿ - 517 507.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

ಆಂಗ್ಲಮೂಲ : **ಡಾ।। ಎನ್. ರಮೇಶನ್**, ಐ.ಎ.ಎಸ್.
ಕನ್ನಡಾನುವಾದ : **ಬಿ. ಎನ್. ಶ್ರೀನಿವಾಸನ್**. ಎಂ.ಎ.

## ಆಧುನಿಕ ಕಾಲದಲ್ಲಿ ತಿರುಮಲೆ (1980 ರ ವರೆಗಿನ ಬೆಳವಣಿಗೆ)

(ಮುಂದುವರೆದಿದೆ.)

1932 ರಲ್ಲಿ ತಿ.ತಿ.ದೇ. ಕಾಯದೆಯನ್ನು ಆಲಯದ ಆಡಳಿತವನ್ನು ಸುಧಾರಿಸುವ ದೃಷ್ಟಿಯಿಂದ ಏರ್ಪಡಿಸಲಾಯಿತು. ಈ ಕಾಯದೆಯಿಂದಾಗಿ ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತವು ಏಳುಮಂದಿಯ ಒಂದು ಸಮಿತಿಗೆ ಹಸ್ತಾಂತರವಾಯಿತು. ಈ ಕಾಯದೆಯ ರೀತ್ಯಾ ಮದರಾಸು ಉಚ್ಚ ನ್ಯಾಯಾಲಯದ ಮೂಲಕ ಒಬ್ಬ ಕಮೀಷನರನ ನೇಮಕವಾಗಿ ಆತನು ಆಲಯದ ಕಾರ್ಯಭಾರದ ಮೇಲುಸ್ತುವಾರಿ ನೋಡು ವಂತಾಯಿತು. ಈ ಕಾಯದೆಯನ್ನು ಸ್ವಾತಂತ್ರ್ಯಾನಂತರ 1951 ರ ಮದರಾಸು ಹಿಂದೂ ಧಾರ್ಮಿಕ ಹಾಗೂ ದತ್ತಿ ಕಾಯದೆಯಿಂದ ಕೊನೆಗೊಳಿಸಲಾಯಿತು.

1933 ನೇ ವರ್ಷದಲ್ಲಿ ಜಾರಿಗೆ ಬಂದಂತಹ ತಿ.ತಿ.ದೇ. ಕಾಯದೆಯು ನಿಸ್ಸಂದೇಹವಾಗಿ ಆಲಯದ ಆಡಳಿತವನ್ನು ಕಮೀಷನರರ ಕೈಗೆ ಒಪ್ಪಿಸಿತು. ಕಾರಣ ಈ ಕಾಯದೆಯನ್ನು ರೂಪಿಸಿದವರ ದೃಷ್ಟಿಯೇ, ಆಲಯದ ನಿವ್ವಳ ಹಣವನ್ನು ಜಾತ್ಯತೀತ ಏಳ್ಗೆಯ ಕೆಲಸಗಳಿಗೆ ಬಳಸುವುದಾಗಿದ್ದು, ಈ ಮೂಲಧನದ ದಾನಗಳನ್ನು ನೀಡಿದವರ ಆಶಯಗಳು, ಈ ಹಣದ ಬಳಕೆಯ ಬಗ್ಗೆ ಅವರುಗಳ ಉದ್ದೇಶಗಳನ್ನು ತಿಳಿಯಲು ಪ್ರಯತ್ನ ಪಡದಿದ್ದುದೇ ಆಗಿದ್ದಿತು.

ಸ್ಥಳೀಯ ಮುಸಲ್ಮಾನ ಅರಸರಿಗೆ, ಯಾತ್ರಿಕರ ಬಗ್ಗೆ ಉದಾರತೆಯಿಂದ ವರ್ತಿಸಲು ನೀಡುವ ಪ್ರೋತ್ಸಾಹಕ ಧನದಂತೆ ಕೆಲಸ ಮಾಡುತ್ತಿದ್ದಿತು ಎಂಬುದೇ ಇಲ್ಲಿನ ಪೂಜೆ ಸೇವೆಗಳಲ್ಲಿನ ಶುಲ್ಕಗಳಿಗೆ ಮೂಲಕಾರಣ. ದುರದೃಷ್ಟದಿಂದಾಗಿ ಈ ಪದ್ಧತಿಯು ಶಾಶ್ವತವಾಗಿ ತಳವೂರಿ ಇಂದಿಗೂ ನಮ್ಮ ದೇಶದ ಆಲಯಗಳ ಆಡಳಿತದ ಕಾಯದೆಗಳಲ್ಲಿನ ಮೂಲ ಸೂತ್ರವಾಗಿ ನಡೆದಿದೆ.

ಕ್ರಿ.ಶ. 830 ರಿಂದ ಆರಂಭವಾಗಿ ಕಾಲದಿಂದ ಕಾಲಕ್ಕೆ ಶತಮಾನಗಳ ಅವಧಿಯಲ್ಲಿ ವಿವಿಧ ದನರಾಶಿ, ಭೂಮಿಕಾಣಿಗಳ ಕಾಣಿಕೆಗಳ ವಿವರಗಳನ್ನು ತಿಳಿದು ಅವುಗಳ ಉದ್ದೇಶಗಳನ್ನು ಶಾಶ್ವತವಾಗಿ ನಡೆಸಿಕೊಂಡು ಮುಂದುವರೆಯಬೇಕಾದದ್ದು ಒಂದು ಪವಿತ್ರವಾದ ನೈತಿಕ ಕರ್ತವ್ಯವಾಗಿದ್ದು, ನಮ್ಮ ಪೂರ್ವಿಕರಿಗೆ ನಾವು ಸಲ್ಲಿಸಬೇಕಾದ ಮರ್ಯಾದೆಯ ಋಣವಾಗಿದೆ.

ಈ ಕಾಯದೆಯ ಪ್ರಕಾರ ಆಡಳಿತವನ್ನು ಏಳು ಮಂದಿಯ ಸಮಿತಿಯ ಹಾಗೂ ಒಬ್ಬ ಸಂಬಳಗಾರನಾದ ಕಮೀಷನರನಿಗೆ ಒಪ್ಪಿಸಲಾಗಿದ್ದಿತು. ಮೊದಲಬಾರಿಗೆ ಆಲಯದ ಆಡಳಿತ ನಿರ್ವಹಣೆಗೆ ಯಾವುದೇ ಅರ್ಹತೆಯನ್ನು ನಿರ್ದೇಶಿಸದೆ, ಕಾರ್ಯಾಂಗವು ಯಾರನ್ನು ಬೇಕಾದರೂ ಸಮಿತಿಯ ಸದಸ್ಯರನ್ನಾಗಿ ನೇಮಕಮಾಡಿ, ಅಥವಾ ಕಮೀಷನರ್ ಆಗಿ ನೇಮಕ ಮಾಡಬಹುದಿತ್ತು.

ಕಾಯದೆಯ 28 ನೇ ವಿಭಾಗದನ್ವಯವಾಗಿ ನೇಮಕವಾದ ಸಲಹಾ ಸಮಿತಿಯು ಜಿಯಂಗಾರರ, ಅರ್ಚಕರ, ಆಚಾರ್ಯ ಪುರುಷರ ಹಾಗೂ ಆಲಯದ ಇನ್ನಿತರ ಮಿರಾಸಿದಾರರ ಪ್ರತಿನಿಧಿಗಳನ್ನು ಒಳಗೊಂಡಿದ್ದಿತು. ಇದರ ಕೆಲಸ ಆಡಳಿತ ಸಮಿತಿಗೆ ಆಡಳಿತ ವಿಷಯದಲ್ಲಿ ಸಲಹೆಗಳನ್ನು ನೀಡುವುದಾಗಿದ್ದಿತು. ದೇವಸ್ಥಾನದ ಜಮೀನುಗಳ ವ್ಯವಹಾರಗಳ ಬಗ್ಗೆ ಸಲಹೆಗಳನ್ನು ನೀಡಲು ಆಲಯ ಭೂಮಿಗಳ ರೈತರ ಪ್ರತಿನಿಧಿಗಳ ಒಂದು ಪ್ರತ್ಯೇಕ ಸಲಹಾ ಸಮಿತಿಯಿದ್ದಿತು. ಈ ಎರಡನೆಯ ಸಲಹಾ ಸಮಿತಿಯು ನಾಮ ಮಾತ್ರವೇ ಆಗಿದ್ದಿತು ಕಾರಣ ಎಲ್ಲ ವ್ಯವಸಾಯ ಭೂಮಿಗಳೂ ವ್ಯವಸಾಯ ಜಮೀನು ಶಾಸನದ ಪ್ರಕಾರ ನಿಯಂತ್ರಿತವಾಗಿ ಕಂದಾಯ ತೆರಿಗೆಗಳೆಲ್ಲ ಅದೇ ಶಾಸನದ ಪ್ರಕಾರ ಸಂದಾಯವಾಗುವಂತಿದ್ದಿತು. ಮೊದಲನೆಯ ಸಲಹಾ ಸಮಿತಿಯು ಜಿಯಂಗಾರರು ಅರ್ಚಕರು, ಮಿರಾಸಿದಾರರು - ಮೊದಲಾದವ ರಿಂದ ಕೂಡಿದ್ದು ಇವರೇ ಆಡಳಿತ ಸಮಿತಿಯ ನಿಜವಾದ ಆಡಳಿತ ಮಾಡುತ್ತಿದ್ದರು.

ಈ ಕಾಯದೆಯನ್ನು 1951 ರ ಮದರಾಸು ಹಿಂದೂ ದಾನ ದತ್ತಿ ಕಾಯದೆಯಿಂದ ಬದಲಾಯಿಸಲಾಯಿತು.

1951 ರ ಮದರಾಸು ಹಿಂದೂ ದಾನದತ್ತಿ ಕಾಯದೆಯ 80 ರಿಂದ 85 ನೇ ಕಲಮುಗಳು ತಿ. ತಿ. ದೇವಸ್ಥಾನಗಳ ಆಡಳಿತಗಳಿಗೆಂದೇ ಪ್ರತ್ಯೇಕವಾಗಿ ವಿನ್ಯಾಸವಾದವು. 80 ನೇ ಕಲಮಿನ ಪ್ರಕಾರ ರಾಜ್ಯಸರ್ಕಾರವು ಐದು ಮಂದಿಯ ಒಂದು ಧರ್ಮಕರ್ತರ ಮಂಡಳಿಯನ್ನು ನಿಯಮಿಸುವುದು. ಈ ಮಂಡಳಿಯ ಸದಸ್ಯರು ಐದು ವರ್ಷಕಾಲ ಅಧಿಕಾರದಲ್ಲಿರತಕ್ಕದ್ದು. ಈ ಕಾಯದೆಯನ್ವಯವಾಗಿ ಸರ್ಕಾರವು ಒಬ್ಬ ಆಡಳಿತಾಧಿಕಾರಿ (ಕಾರ್ಯನಿರ್ವಹಣಾಧಿಕಾರಿ) ಯನ್ನು ನೇಮಕ ಮಾಡುವಂತೆ ಇದ್ದಿತು. ಈತನು ಆಲಯದ ವ್ಯವಹಾರಗಳನ್ನು ಆಸ್ತಿಗಳನ್ನು ನೋಡಿಕೊಳ್ಳುವ ಅಧಿಕಾರ ಹೊಂದಿರುವನು. 2) ಈತನು ಆಲಯದ ಎಲ್ಲಾ ಆಭರಣಗಳ ದಾಖಲೆಗಳನ್ನೂ ನೋಡಿಕೊಂಡು ಎಲ್ಲ ಆಸ್ತಿ, ಧನ, ಭೂಮಿ, ಮತ್ತಿತರ ಆಲಯದ ಎಲ್ಲ ಆದಾಯಗಳನ್ನು ನೋಡಿಕೊಳ್ಳತಕ್ಕದ್ದು.

3) ಆದಾಯದ ಸೂಕ್ತ ಸಂಗ್ರಹದ ಏರ್ಪಾಡುಗಳನ್ನು ಮಾಡಿ, ವೆಚ್ಚಗಳ ಸೂಕ್ತ ನಿರ್ವಹಣೆಯ ಜವಾಬ್ದಾರಿ ಈತನದು. ಮುಂಗಡ ಪತ್ರದಲ್ಲಿ, ಪ್ರಾವಧಾನ ಮಾಡಿಲ್ಲದ ಅಂಶಗಳಲ್ಲಿಯೂ ಅಂತಹ ವೆಚ್ಚ, ಕೆಲಸಗಳು ಆಲಯದ ಆಸ್ತಿಗಳ ಪರಿರಕ್ಷಣೆಗೆ ಅತ್ಯಗತ್ಯ ಎಂದು ತೋರಿದಾಗ, ಯಾತ್ರಿಕರ ದೃಷ್ಟಿಯಿಂದ ಮುಖ್ಯ ಎಂದು ತೋರಿದಾಗ ಅಂತಹ ತತ್‌ಕ್ಷಣದ ಕೆಲಸಗಳನ್ನು, ವೆಚ್ಚಗಳನ್ನು ಮಾಡಲು ಅಧಿಕಾರ ಹೊಂದಿದ್ದನು. ಇಂತಹ ತುರ್ತು ಕ್ರಮಗಳ ವೆಚ್ಚಗಳನ್ನು ಆಲಯದ ನಿಧಿಗಳಿಂದ ನೀಡುವಂತಹ ನಿರ್ದೇಶನ ಕೊಡುವ ಅಧಿಕಾರ ವಿದ್ದಿತು. ಆದರೆ 4ನೇ ಕಲಮಿನನ್ವಯ ಕಾರ್ಯ ನಿರ್ವಹಣಾಧಿಕಾರಿಯು ಇಂತಹ ತುರ್ತು ಕ್ರಮಗಳನ್ನು ಕೈಗೊಂಡಾಗ ಅವುಗಳ ವರದಿಯನ್ನು ಧರ್ಮಕರ್ತರ ಮಂಡಳಿಗೆ ತಿಳಿಸಬೇಕಾಗಿದ್ದಿತು.

ಹಿಂದೂ ದಾನದತ್ತಿ ಕಾಯದೆಯನ್ವಯವಾಗಿ ಕಮೀಷನರ್ ಹಲವು ಅಧಿಕಾರಗಳನ್ನು ಹೊಂದಿದ್ದನು. ಉದಾಹರಣೆಗೆ ವಿವಾದಗಳನ್ನು ಬಗೆಹರಿಸುವ ಅಧಿಕಾರ, ದಾನಗಳನ್ನು ವಿನಿಯೋಗಿಸುವ ಅಧಿಕಾರ.

85 ನೇ ಕಲಮು ಆಲಯದ ನಿಧಿಗಳನ್ನು ಯಾವ ಯಾವ ಕಾರ್ಯಗಳಲ್ಲಿ ವೆಚ್ಚಮಾಡಬಹುದು ಎಂಬ ವಿವರಗಳನ್ನು ಪಟ್ಟಿಮಾಡುತ್ತದೆ. ಅದನ್ನು ಇಲ್ಲಿ ಯಥಾವತ್ ನೀಡಲಾಗಿದೆ-

1. ದೇವಸ್ಥಾನವನ್ನು ನೋಡಿಕೊಂಡು ಅದರ ವ್ಯವಹಾರಗಳನ್ನು ಆಡಳಿತವನ್ನು ನಡೆಸುವಿಕೆ.

2. ಷೆಡ್ಯೂಲು - 3 ರಲ್ಲಿ ಹೇಳಲಾದಂತೆ ಶೈಕ್ಷಣಿಕ ಸಂಸ್ಥೆಗಳನ್ನು ನಡೆಸುವಿಕೆ.

3. ತಿರುಮಲೆಗೆ ಬರತಕ್ಕಂತಹ ಯಾತ್ರಿಕರಿಗೆ ಆರೋಗ್ಯದ ಪರಿಸರವನ್ನುಂಟುಮಾಡುವ ಆಸ್ಪತ್ರೆಗಳ ನಿರ್ಮಾಣ, ಅವುಗಳ ಆಡಳಿತ.

4. ಎಲ್ಲಾ ವರ್ಗದ ಯಾತ್ರಿಕರಿಗೂ ತಕ್ಕಂತಹ ತಾತ್ಕಾಲಿಕ ವಸತಿಯನ್ನುಂಟುಮಾಡಲು ಸತ್ರಗಳ ನಿರ್ಮಾಣ, ಆಡಳಿತ.

5. ಯಾತ್ರಿಕರಿಗೆ ನೀರಿನ ಸೌಲಭ್ಯ ಹಾಗೂ ಪರಿಶುಭ್ರತೆಯನ್ನುಂಟುಮಾಡುವಿಕೆ.

6. ಆಲಯದ ಹಸು, ಕುದುರೆ, ಆನೆ ಮೊದಲಾದವನ್ನು ನೋಡಿಕೊಳ್ಳಲು ಒಂದು ಪಶುವೈದ್ಯಶಾಲೆಯ ನಿರ್ಮಾಣ.

7. ಸರ್ಕಾರದ ಅನುಮೋದನೆಯೊಡನೆ ಆಲಯದ ಕೆಲಸಗಳಿಗಾಗಿ ಯಾವುದೇ ಭೂಮಿಯ ಕೊಂಡುಕೊಳ್ಳುವಿಕೆ.

8. ಯಾತ್ರಿಕರಿಗೆ ಅನುಕೂಲ ಮಾಡಿಕೊಡಲು ತಕ್ಕ ದೀಪಗಳ ವ್ಯವಸ್ಥೆ ಹಾಗೂ ರಸ್ತೆಗಳ ನಿರ್ಮಾಣ.

9. ಆಲಯದಲ್ಲಿ ಕೆಲಸ ಮಾಡಲು ಅರ್ಚಕರಿಗೆ ತರಬೇತಿ ನೀಡುವಿಕೆ. ಅಧ್ಯಾಪಕ ವೇದಪಾರಾಯಣದಾರರಿಗೆ ತರಬೇತಿ.

10. ಸರ್ಕಾರದ ಅನುಮೋದನೆಯಿಂದ ಆಲಯದ ಅನುಕೂಲಕ್ಕಾಗಿ ಯಾವುದೇ ಕೆಲಸ ಮಾಡುವಿಕೆ.

1951 ರ ಶಾಸನದಲ್ಲಿ ಉಂಟುಮಾಡಲಾದ ಪ್ರಾವಧಾನಗಳನ್ನು ಹೊಸ ಶಾಸನದಿಂದ ಬದಲಾಯಿಸಲಾಯಿತು. (1966 ರ 17 ನೇ ನಂಬರಿನ ಕಾಯದೆ) ಇಲ್ಲಿನ 14 ನೇ ಅಧ್ಯಾಯವು ಆಲಯದ ಆಡಳಿತಕ್ಕೆ ತಕ್ಕ ಅವಕಾಶವನ್ನು ಕಲ್ಪಿಸಿತು.

ಮೇಲಿನ ಶಾಸನದ 85 ರಿಂದ 91 ನೆಯ ನೆಯ ಕಲಮುಗಳು ತಿ. ತಿ. ದೇವಸ್ಥಾನಗಳ ಆಡಳಿತವನ್ನು ನಿರ್ದೇಶಿಸುವ ಸೂತ್ರಗಳನ್ನು ನಿರೂಪಿಸಿತು. 86 ನೇ ಕಲಮು ದೇವಸ್ಥಾನದ ಆಡಳಿತವನ್ನು 11 ಮಂದಿಗೆ ಕಡಿಮೆಯಾಗದಂತೆ ಸರ್ಕಾರವು ನೇಮಕಮಾಡಿದ ಧರ್ಮದರ್ಶಿಗಳ ಮಂಡಳಿಯು ಗಮನಿಸಬೇಕೆಂದು ವಿಧಿಸಿತು. ಇವರಲ್ಲಿ ಮೂವರು ಶಾಸನ ಸಭಾ ಸದಸ್ಯರಾಗಿರಬೇಕು. ಒಬ್ಬರು ಅನುಸೂಚಿತ ಜಾತಿಯವರಾಗಿದ್ದು ಒಬ್ಬ ಮಹಿಳೆ ಇರಬೇಕು. (86 ನೇ ಕಲಮಿನ ಹಲವು ವಿನಾಯತಿಗಳನ್ನು ಒಳಗೊಂಡಂತೆ) ಧರ್ಮದರ್ಶಿಗಳ ಮಂಡಳಿಯ ಸದಸ್ಯರು ಮೂರು ವರ್ಷಗಳ ಕಾಲವಧಿಯ ಅಧಿಕಾರ ಪಡೆಯತಕ್ಕದ್ದು. 87ನೇ ಕಲಮು ಸರ್ಕಾರಕ್ಕೆ ಆಲಯಕ್ಕೆಂದು ಒಬ್ಬ ಕಾರ್ಯನಿರ್ವಹಣಾಧಿಕಾರಿಯನ್ನೂ ನಿಯಮಿಸುವ ನಿರ್ದೇಶವನ್ನೂ ಅಗತ್ಯಬಿದ್ದರೆ ಒಬ್ಬ ಉಪಕಾರ್ಯನಿರ್ವಹಣಾಧಿಕಾರಿಯನ್ನೂ ನಿಯಮಿಸುವ ಅಧಿಕಾರ ನೀಡುತ್ತದೆ. 87 (2) ನೇ ಕಲಮಿನನ್ವಯ ಕಾರ್ಯ ನಿರ್ವಹಣಾಧಿಕಾರಿಯು ತನ್ನ ಕೆಲ ಅಧಿಕಾರ ವನ್ನು ಉಪಕಾರ್ಯ ನಿರ್ವಹಣಾಧಿಕಾರಿಗೆ ಒಪ್ಪಿಸಬಹುದು. ಹಂಚಬಹುದು. 88 ಹಾಗೂ 89 ನೇ ಕಲಮುಗಳು ಧರ್ಮದರ್ಶಿಗಳ ಹಾಗೂ ಕಾರ್ಯನಿರ್ವಹಣಾಧಿಕಾರಿಗಳ ಕರ್ತವ್ಯ ಭಾರಗಳ, ಅಧಿಕಾರದ ವಿಭಾಗೀಕರಣ ಮಾಡುತ್ತದೆ. 91 ನೇ ಕಲಮು ಆಲಯದ ನಿಧಿಯನ್ನು ಬಳಸಬಹುದಾದ ಕ್ಷೇತ್ರಗಳನ್ನು ವಿವರಿಸುತ್ತದೆ. ಅವು ಹೀಗೆ 91. ಅ) ತಿರುಮಲ ತಿರುಪತಿ ದೇವಸ್ಥಾನಗಳ ನಿಧಿಗಳನ್ನು ಕೆಳಕಂಡ ಎಲ್ಲ ಕ್ಷೇತ್ರಗಳಲ್ಲಿ ಅಥವಾ ಯಾವುದೇ ಒಂದು ಕ್ಷೇತ್ರದಲ್ಲಿ ಅಥವಾ ಈ ಕಾಯದೆಯನ್ನು ಇತರ ಯಾವುದೇ ಕಲಮಿನಲ್ಲಿ ಅನುಮತಿಸಲ್ಪಟ್ಟ ಕೆಲಸಗಳಲ್ಲಿ ಬಳಸಬಹುದು.

1. ಹಿಂದೂಧಾರ್ಮಿಕ ತತ್ತ್ವಗಳ ಪ್ರಚಾರ. ತಿರುಮಲೆ - ತಿರುಪತಿ ದೇವಸ್ಥಾನಗಳ ಎಲ್ಲ ಆಲಯಗಳ ಆಡಳಿತ ಹಾಗೂ ತಿ.ತಿ.ದೇ. ಶಾಲೆಗಳು, ಮತ್ತಿತರ ಸಂಸ್ಥೆಗಳೂ ಸೇರುತ್ತವೆ.

ಆಂಧ್ರಪ್ರದೇಶದ ಸರ್ಕಾರಕ್ಕೆ ರಾಜ್ಯದ ಎರಡೂ ಶಾಸನ ಸಭೆಗಳಲ್ಲಿ ಅಂಗೀಕೃತವಾದ ನಿರ್ಣಯದನ್ವಯ ಆಂಧ್ರಪ್ರದೇಶದ ಗೆಜೆಟ್‌ನ ಪ್ರಕಟನೆಯ ನಂತರ ಈ ಶಾಸನದ ಯಾವುದೇ ಭಾಗವನ್ನು ಬದಲಾಯಿಸುವ, ತಿದ್ದುವ, ಬಿಡುವ ಅಧಿಕಾರವನ್ನು ನೀಡಲಾಗಿದೆ ಎಂಬುದರ ಹೊರತು ಪಡಿಸಿ ಮೇಲಿನ ಅಂಶ ಜಾರಿಗೆ ಬರುವುದು.

2. ಆಲಯಕ್ಕೆ ಬರುವ ಯಾತ್ರಿಕರ ಆರೋಗ್ಯ ಪರಿರಕ್ಷಿಸುವ ಸಲುವಾಗಿ ಆಸ್ಪತ್ರೆಗಳ ನಿರ್ಮಾಣ, ನಿರ್ವಹಣೆ.

3. ಯಾತ್ರಿಕರ ಸೌಲಭ್ಯಕ್ಕಾಗಿ ಸತ್ರಗಳ ವಿಶ್ರಾಂತಿಗೃಹಗಳ ನಿರ್ಮಾಣ.

4. ಯಾತ್ರಿಕರಿಗಾಗಿ ನೀರಿನ ಆಯೋಜನೆ ಮತ್ತಿತರ ಪೌರ ಪರಿಶುಭ್ರತೆಯ ಕಾರ್ಯಕ್ರಮಗಳು.

5. ತಿ.ತಿ.ದೇ ಗಳ ಪಶುಸಂಪತ್ತಿನ ನಿರ್ವಹಣೆಗಾಗಿ ಪಶುವೈದ್ಯಶಾಲೆ, ಡೈರಿ ಫಾರಂ ನಿರ್ಮಾಣ ನಿರ್ವಹಣೆ.

6. ಸರಕಾರದ ಅನುಮೋದದೊಡನೆ ತಿ.ತಿ.ದೇ.ಗಳ ಯಾವುದೇ ಉದ್ದೇಶಕ್ಕಾಗಿ ಯಾದರೂ ಹೊಸ ಜಮೀನುಗಳ ಕೊಳ್ಳುವಿಕೆ.

7. ಯಾತ್ರಿಕ ಭಕ್ತರ ಅನುಕೂಲಕ್ಕಾಗಿ ರಸ್ತೆಗಳ ನಿರ್ಮಾಣ, ಸಂಪರ್ಕ ಸಾಧನಗಳ ಅಭಿವೃದ್ಧಿ ದೀಪಗಳ ಏರ್ಪಾಡು.

8. ತಿರುಮಲ ತಿರುಪತಿ ದೇವಸ್ಥಾನಗಳಲ್ಲಿ ಪೂಜಾದಿ ಧಾರ್ಮಿಕ ಕ್ರಿಯೆಗಳನ್ನು ನಡೆಸುವ ಅರ್ಚಕರಿಗೆ ತರಬೇತಿ ನೀಡುವಿಕೆ, ಅಧ್ಯಾಪಕರಿಗೆ ವೇದಪಾರಾಯಣದಾರರಿಗೆ ತರಬೇತಿ ನೀಡುವಿಕೆ.

9. ಸಂಸ್ಕೃತವನ್ನೂ ಸೇರಿದಂತೆ ಭಾರತೀಯ ಭಾಷೆಗಳ ಶಿಕ್ಷಣ ನೀಡುವಿಕೆ.

10. ತಿರುಮಲ ತಿರುಪತಿ ದೇವಸ್ಥಾನಗಳು ಕೈಗೆತ್ತಿಕೊಳ್ಳುವ ಸರ್ಕಾರದಿಂದ ಅಂಗೀಕೃತವಾದ ಮತ್ತೆ ಯಾವುದಾದರೂ ಕೆಲಸ.

1) ತಿರುಮಲ ತಿರುಪತಿ ದೇವಸ್ಥಾನಗಳಿಗೆ ಸಂಬಂಧಪಟ್ಟ ಸರ್ಕಾರದಿಂದ ಅನುಮೋದನೆ ಪಡೆದ ಧಾರ್ಮಿಕ, ಸಾಮಾಜಿಕ ಶೈಕ್ಷಣಿಕ ವಿಷಯಗಳು.

2) ಶ್ರೀ ವೆಂಕಟೇಶ್ವರ ವಿಶ್ವ ವಿದ್ಯಾಲಯಕ್ಕೆಂದು ತಿರುಮಲ ತಿರುಪತಿ ದೇವಸ್ಥಾನಗಳು ವರ್ಷಕ್ಕೆ ಕನಿಷ್ಠ ಎರಡೂವರೆ ಲಕ್ಷ ರೂಪಾಯಿಗಳನ್ನು ತೆಗೆದಿಡಬೇಕು.

3) ಅ) ತಿರುಮಲೆ ತಿರುಪತಿ ದೇವಸ್ಥಾನಗಳು ಹಿಂದೂ ಧರ್ಮ ಪ್ರತಿಷ್ಠಾನವೆಂಬ ಧಾರ್ಮಿಕ ಸಂಸ್ಥೆಯನ್ನು ಏರ್ಪಡಿಸಿ ವರ್ಷಕ್ಕೆ ಒಂದು ಲಕ್ಷ ರೂಪಾಯಿಗಳಿಗಿಂತ ಕಡಿಮೆಯಾಗದಂತೆ ಇದರ ವೆಚ್ಚಗಳಿಗಾಗಿ ಧನವನ್ನು ವ್ಯಯಿಸಬೇಕು.

ಈ ಪ್ರತಿಷ್ಠಾನದ ಗುರಿಗವ್ಯುಗಳು ಹೀಗಿರಬೇಕು.

1. ಹಿಂದೂ ಧರ್ಮದ ಏಳಿಗೆ ಪ್ರಚಾರಕ್ಕಾಗಿ ಧರ್ಮ ಪ್ರಚಾರಕರನ್ನು ಧರ್ಮಾಚಾರ್ಯರನ್ನು ತರಬೇತಿ ನೀಡುವುದು,

2. ಹಿಂದೂ ಧರ್ಮಕ್ಕೆ ಸಂಬಂಧಿಸಿದ ಸಾಹಿತ್ಯದ ನಿರ್ಮಾಣ ಪ್ರಕಟನೆಗಳು.

3. ಹಿಂದೂ ಧರ್ಮದ ತತ್ವಗಳನ್ನು ಮೌಲ್ಯಗಳನ್ನು ತಿಳಿಹೇಳಲು ತಕ್ಕ ವೇದಿಕೆಯಾದ ಶಿಕ್ಷಣ ಶಿಬಿರಗಳು.

4. ಮೇಲೆ ಹೇಳಿದ ಉದ್ದೇಶಗಳಿಗೆ ಸಂಬಂಧ ಪಟ್ಟ ಇತರ ವಿಷಯಗಳು.

ಸರ್ಕಾರವು ಈ ಬಗ್ಗೆ ಉಂಟುಮಾಡುವ ನಿಯಮ ನಿಬಂಧನೆಗಳಿಗೆ ಒಳಪಟ್ಟಂತೆ ತಿರುಮಲೆ ತಿರುಪತಿ ದೇವಸ್ಥಾನಗಳ ಧರ್ಮದರ್ಶಿ ಮಂಡಳಿಯು ಈ ಪ್ರತಿಷ್ಠಾನಕ್ಕೆ ತಕ್ಕ ನಿಯಮಾವಳಿಯನ್ನು ರೂಪಿಸಬಹುದು.

ಈ ಕಾಯದೆಯ ಎಲ್ಲ ಪ್ರಾವಧಾನಗಳನ್ನೂ ಬಳಸಿಕೊಂಡು ದೇವಸ್ಥಾನದ ಮಂಡಳಿಯು ಆಲಯದ ಬಗ್ಗೆ ಹಲವಾರು ಅಭಿವೃದ್ಧಿಕಾರ್ಯಗಳನ್ನು ಸಾಧಿಸಿದೆ.

1966 ನೇ ವರ್ಷದ ಶಾಸನವು ತಿರುಮಲ ತಿರುಪತಿ ದೇವಸ್ಥಾನಗಳನ್ನು ರಾಜ್ಯದ ಇತರ ಆಲಯಗಳಂತೆಯೇ ನೋಡುವಂತಾದರೂ, ಮುಜರಾಯಿ ಇಲಾಖೆಯ ಸುಪರ್ದಿನಲ್ಲಿ ಪೂರ್ಣವಾಗಿ ನಡೆಯುವಂತೆ ಆಯಿತು. ಕಡಿಮೆ ಯಾತ್ರಿಕರು ಸಂದರ್ಶಿಸುವ ಸಣ್ಣ ಆಲಯಗಳ ಬಗ್ಗೆ ಇಂತಹ ವ್ಯವಸ್ಥೆ ಸೂಕ್ತವೇ ಆಗಿದ್ದರೂ, ಜಗತ್ತಿನ ಹಿರಿಯ ಆಲಯಗಳಲ್ಲಿ ಒಂದಾದ ತಿ. ತಿ. ದೇವಸ್ಥಾನಗಳನ್ನು ಸಣ್ಣಕಿರಿಯ ಆಲಯಗಳಿಗೆ ಹೋಲಿಸಿ ಸಮಾನಿಸುವುದು ಒಂದು ರೀತಿಯ ಹಿನ್ನಡೆಯಾಗುತ್ತದೆ. ಇದನ್ನು ಅರಿತುಕೊಂಡ ಸರ್ಕಾರ 1979 ರಲ್ಲಿ ಹೊಸ ತಿ.ತಿ.ದೇ. ಕಾಯದೆಯನ್ನು ಉಂಟುಮಾಡಿತು. ಇದರಂತೆ ಆಲಯದ ಆಡಳಿತವು ಒಂದು ಸರ್ಕಾರದ ನೇಮಕಾತಿ ಪಡೆದ ಸಣ್ಣ ಆಡಳಿತ ನಿರ್ವಾಹಕ



ಹಳೆಯ ದಾರಿಗೋಪುರಗಳ ಒಂದು ಸಾಲನ್ನು ತೆಗೆದು ಸನ್ನಿಧಿ ಬೀದಿಗೆ ಹೋಗುವ ದಾರಿಯಲ್ಲಿ ನಿರ್ಮಾಣವಾದ ವೈಕುಂಠ ತೋರಣ

ಸಮಿತಿಯಲ್ಲಿ ಕೇಂದ್ರೀಕೃತವಾಯಿತು. ಈ ಆಡಳಿತ ನಿರ್ವಾಹಕ ಮಂಡಳಿಯಲ್ಲಿ ಸರ್ಕಾರದಿಂದ ನಾಮಕರಣ ಹೊಂದಿದ ಒಬ್ಬ ಅಧ್ಯಕ್ಷರು ಹಾಗೂ ಮತ್ತಿಬ್ಬರು ಸದಸ್ಯರನ್ನು ಹೊಂದಿರುವಂತೆ ಆಯಿತು. ದೇವಾದಾಯ ಇಲಾಖೆಯ ಕಮೀಷನರ್ ಹಾಗೂ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಗಳನ್ನು ಪದ ನಿಮಿತ್ತ ಸದಸ್ಯರನ್ನಾಗಿ ಮಾಡಲಾಯಿತು. ಜಿಲ್ಲಾಧಿಕಾರಿಯ ಸ್ಥಾಯಿಗೆ ಕಡಮೆಯಿಲ್ಲದಂತಹ ಅಧಿಕಾರವನ್ನು ಕಾರ್ಯನಿರ್ವಹಣಾಧಿಕಾರಿಗೆ ನೀಡಲಾಯಿತು. ಆಲಯದ ಹಣಕಾಸಿನ ವಿಷಯದಲ್ಲಿ ಸಲಹೆ ಸೂಚನೆಗಳನ್ನು ಈ ಕಾಯದೆಯ ಅನುಸಾರವಾಗಿ ಒಬ್ಬ ಆರ್ಥಿಕ ಸಲಹಾದಾರರ ಪದವಿಯ ಏರ್ಪಾಡು ಆಯಿತು. ಹಿಂದೂ ಧರ್ಮ ಪ್ರತಿಷ್ಠಾನವನ್ನು ಒಂದು ಹೊಸ ಹೆಸರಿನಿಂದ ಮುಂದುವರಿಸಬೇಕೆಂದು ಈ ಕಾಯದೆಯು ಅವಕಾಶ ನೀಡಿತು. ವೈದಿಕ ಶಿಕ್ಷಣ, ಸಂಶೋಧನೆ ಮೊದಲಾದವುಗಳನ್ನು ಮುಂದುವರೆಸಲು ಶ್ರೀ ವೆಂಕಟೇಶ್ವರ ಶಿಷ್ಟಾಚಾರ ಸಂಸ್ಥೆಯನ್ನು ಸ್ಥಾಪಿಸುವ ಅವಕಾಶವನ್ನು ನೀಡಿತು. ಹಿಂದೂ ಧರ್ಮ ಹಾಗೂ ಸಂಸ್ಕೃತಿಯ ಪ್ರಚಾರ, ಪರಿರಕ್ಷಣೆಗಳಲ್ಲಿ ಯಾವ ತರಹದಲ್ಲಿ ಆಲಯಧನವನ್ನು ವೆಚ್ಚಮಾಡಬೇಕೆಂಬುದನ್ನು ತಿಳಿಸಿತು. ಈ ಕಾಯದೆಯ ಫಲಸ್ವರೂಪವಾಗಿ ಉಂಟಾದ ಸಿದ್ಧಿಗಳನ್ನೂ ಯಾತ್ರಿಕ ಪ್ರಯೋಜನಗಳ ದೃಷ್ಟ್ಯಾ ಲೆಕ್ಕಹಾಕಲು ಇನ್ನೂ ಕಾಲ ಸಾಕಷ್ಟು ಕಳೆದಿಲ್ಲವೆನ್ನಬೇಕು.

**ತಿ.ತಿ.ದೇ.ಗಳ ಈಚಿನ ಸಾಧನೆಗಳು :** ಹಿಂದಿನ ಎರಡು ಮೂರು ದಶಕಗಳಲ್ಲಿನ ಮುಖ್ಯ ಸಾಧನೆಗಳನ್ನು ಗುರುತಿಸಲು ಸಾಧ್ಯವಿದೆ.

(ಈ ಪುಸ್ತಕವನ್ನು ಡಾ॥ ರಮೇಶನ್ ಅವರು 1979-80ರಲ್ಲಿ ಬರೆದರು. -ಅನುವಾದಕ)

**ಸಮಾಚಾರ ಕೇಂದ್ರಗಳು :** ತಿರುಪತಿ ತಿರುಮಲೆಗಳಲ್ಲಿಯೇ ಅಲ್ಲದೆ ದೇಶದ ನಾನಾ ನಗರಗಳಲ್ಲಿಯೂ ಸತ್ರಗಳು ಸಮಾಚಾರ ಕೇಂದ್ರಗಳುಂಟಾಗಿವೆ. ತಿರುಮಲೆಗೆ ಆಗಮಿಸಲು ಅಪೇಕ್ಷಿಸುವ ಯಾತ್ರಿಕರಿಗೆ ಸೂಕ್ತ ಸಮಾಚಾರಗಳನ್ನು ತಿಳಿಸಿಕೊಡಲು ಸಾಕಷ್ಟು ವಿಚಾರಣಾ ಕೇಂದ್ರಗಳುಂಟಾಗಿವೆ.

**ವಸತಿ :** 1934 ರ ಮೊದಲು ತಿರುಪತಿ ಹಾಗೂ ತಿರುಮಲೆಗಳಲ್ಲಿ ಯಾತ್ರಿಕರು ತಂಗಲು ಅತಿ ಕಡಿಮೆಯಾದ ವಸತಿ ಸೌಲಭ್ಯವಿದ್ದಿತು. ಈ ಸಮಸ್ಯೆಯನ್ನು ಸಮರ್ಥವಾಗಿ ಎದುರಿಸಿದ ತಿ.ತಿ.ದೇ.ಗಳ ವತಿಯಿಂದ ಅನೇಕ ಕಾಟೇಜುಗಳು, ಅತಿಥಿ ಗೃಹಗಳು, ಸತ್ರಗಳು ನಿರ್ಮಾಣವಾಗಿವೆ. ಆದರೂ ಹೆಚ್ಚಿನ ವಸತಿಯ ಅಗತ್ಯವಿದೆ.

**ನೀರಿನ ಸರಬರಾಜು ಹಾಗೂ ಪಾರಿಶುದ್ಧ್ಯ:** ಪರಿಸರ ಪಾರಿಶುದ್ಧ್ಯವನ್ನು ಉತ್ತಮ ಪಡಿಸಿ ನೀರಿನ ಸರಬರಾಜು ವ್ಯವಸ್ಥೆ ಮಾಡಲಾಗಿದೆ. ತಿರುಮಲೆಗೆ ಪಾಪನಾಶನದಿಂದ ನೀರನ್ನು ಪಂಪ್ ಮಾಡಲಾಗುತ್ತಿದೆ. ಮಲೇರಿಯಾ ರೋಗವನ್ನು ನಿರ್ಮೂಲಗೊಳಿಸಲಾಗಿದ್ದು, ಒಳಚರಂಡಿ ವ್ಯವಸ್ಥೆ ಮಾಡಲಾಗಿದೆ.

**ತಿರುಮಲೆಯ ಸಾರಿಗೆ :** 1944 ರಲ್ಲಿ ತಿರುಮಲೆಗೆ ಘಟ್ಟದ ರಸ್ತೆಯನ್ನು ನಿರ್ಮಿಸುವವರೆಗೆ ಯಾತ್ರಿಕರು ತಿರುಮಲೆಗೆ ಸೋಪಾನ ಮಾರ್ಗವನ್ನು ಏರಿ ನಡೆದೇ ಹೋಗಬೇಕಾಗಿದ್ದಿತು. ಘಟ್ಟದ ರಸ್ತೆಯಾದ ಮೇಲೆ ಹದಿನಾಲ್ಕು ಮೈಲಿದೂರದ ತಿರುಮಲೆಗೆ ವಾಹನ ಪ್ರಯಾಣದಿಂದಲೂ ಸೇರಬಹುದಾಯಿತು. ಮೊದಲಿಗೆ ಎರಡು ಬಸ್‌ಗಳ ಸಾರಿಗೆಯಿಂದ ಆರಂಭವಾದ ಯಾತ್ರಿಕ ಸಾರಿಗೆಯಲ್ಲೀಗ ಹಲವಾರು ಬಸ್‌ಗಳಿದ್ದು ಅಗತ್ಯಕ್ಕೆ ತಕ್ಕಂತೆ ಹೆಚ್ಚಿನ ಬಸ್‌ಗಳನ್ನು ಒದಗಿಸಲಾಗುತ್ತದೆ. ಈಗ ಘಟ್ಟ ಸಾರಿಗೆಯ ವ್ಯವಸ್ಥೆಯನ್ನು ಆಂಧ್ರಪ್ರದೇಶ ರಸ್ತೆ ಸಾರಿಗೆ ಸಂಸ್ಥೆ ನೋಡಿಕೊಳ್ಳುತ್ತಿದೆ.

**ಶಿಕ್ಷಣ :** ದೇವಸ್ಥಾನಗಳ ವತಿಯಿಂದ ಹಲವಾರು ಶಿಕ್ಷಣ ಸಂಸ್ಥೆಗಳು ನಡೆಯುತ್ತಿವೆ. ಒಂದು ಓರಿಯಂಟಲ್ ಕಾಲೇಜು, ಮೂರು ಪ್ರೌಢ ಶಾಲೆಗಳು, ಮೂರು ಕಾಲೇಜುಗಳು ಹಲವು ಪ್ರಾಥಮಿಕ ಶಾಲೆಗಳು, ಒಂದು ವೇದ ಪಾಠಶಾಲೆ, ನಾದಸ್ವರ ಶಾಲೆ, ಶಿಲ್ಪಕಲಾಶಾಲೆ, ದೆಹಲಿಯಲ್ಲಿ ಒಂದು ಕಾಲೇಜು ಮೊದಲಾದವನ್ನು ನಡೆಸುತ್ತಿದೆ. ಜೊತೆಗೇ ತಿರುಪತಿಯಲ್ಲಿನ ಶ್ರೀ ವೆಂಕಟೇಶ್ವರ ವಿಶ್ವವಿದ್ಯಾನಿಲಯಕ್ಕೆ ವಾರ್ಷಿಕ 7 ಲಕ್ಷ ರೂಪಾಯಿಗಳ ಅನುದಾನ ನೀಡುತ್ತದೆ. ಒಂದು ಗೋಶಾಲೆಯನ್ನು - 300 ಸಿಂಧಿ ಹಸುಗಳಿವೆ. ಡೈರಿ ಫಾರಂ ಇದೆ.

**ತಿ.ತಿ.ದೇ. ಮುದ್ರಣಾಲಯ ಹಾಗೂ ಪ್ರಕಟನವಿಭಾಗ :** ತಿ.ತಿ.ದೇ. ಮುದ್ರಣಾಲಯದಲ್ಲಿ ಧಾರ್ಮಿಕ ಸಾಹಿತ್ಯವನ್ನು ಮುದ್ರಿಸಲಾಗುತ್ತಿದೆ. ತಿರುಮಲೆಯಲ್ಲಿ ಹರಿಕಥೆ ಸಂಗೀತ ಕಾರ್ಯಕ್ರಮಗಳನ್ನು ಏರ್ಪಡಿಸಲಾಗುತ್ತಿದೆ. ಮಾಸಪತ್ರಿಕೆ ಸಪ್ತಗಿರಿಯನ್ನು ಕನ್ನಡ, ಹಿಂದಿ ತಮಿಳು ತೆಲುಗು ಆಂಗ್ಲ ಭಾಷೆಗಳಲ್ಲಿ ಪ್ರಕಟಿಸಲಾಗುತ್ತಿದೆ.

**ಇತರ ಸೌಲಭ್ಯಗಳು :** ಇಡೀ ಬೆಟ್ಟದ ಹಾದಿಯನ್ನು ದುರಸ್ತಿಗೊಳಿಸಿ ವಿದ್ಯುದ್ದೀಪಗಳನ್ನು ಅಳವಡಿಸಲಾಗಿದೆ. ಯಾತ್ರಿಕರಿಗೆ ಉಚಿತ ವಸತಿ ಉಚಿತ ವೈದ್ಯಕೀಯ ಸೌಲಭ್ಯಗಳುಂಟು.

**ಸಂಶೋಧನೆ :** 1938 ರಲ್ಲಿ ಪ್ರಾಚ್ಯ ಸಂಶೋಧನ ಶಾಲೆಯು ಸಂಶೋಧನೆಯನ್ನು ತೆಲುಗು, ತಮಿಳು ಸಂಸ್ಕೃತಗಳಲ್ಲಿ ಆರಂಭಿಸಿ ಹಲವಾರು ಅಪರೂಪದ ಹಸ್ತಪ್ರತಿಗಳನ್ನು ಶೇಖರಿಸಿತು. ಈಗ ಈ ಸಂಸ್ಥೆಯನ್ನು ವೆಂಕಟೇಶ್ವರ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲಾಗಿದೆ.

**ಮಾನವ ಸೇವಾ ಸಂಸ್ಥೆಗಳು :** 1939 ರಲ್ಲಿ ಕುಷ್ಠರೋಗಿಗಳ ಪುನರಾವಾಸ ಕೇಂದ್ರವನ್ನು ಆರಂಭಿಸಲಾಯಿತು. 1943 ರಲ್ಲಿ ಒಂದು ಅನಾಥ ಶರಣಾಲಯವನ್ನು ಸ್ಥಾಪಿಸಲಾಯಿತು.

**ರೂಯಾ ಆಸ್ಪತ್ರೆ :** ಬೊಂಬಾಯಿನ ದಾನಿ ರಾಧಾಕೃಷ್ಣ ರೂಯಾ ಅವರು ಐದು ಲಕ್ಷ ರೂಪಾಯಿ ದಾನ ನೀಡಿದಾಗ ತಿ.ತಿ.ದೇ. ಹತ್ತು ಲಕ್ಷ ರೂಪಾಯಿಸೇರಿಸಿ ಇತರ ವಂತಿಗೆಗಳ ಸಹಾಯದಿಂದ ತಿರುಪತಿಯಲ್ಲಿ 300 ಹಾಸಿಗೆಗಳ ಒಂದು ಆಸ್ಪತ್ರೆಯನ್ನು ತನ್ನ ಒಡೆತನದ ಭೂಮಿಯನ್ನು ದಾನ ಮಾಡಿ ನಿರ್ಮಿಸಿದೆ. ಈ ಆಸ್ಪತ್ರೆಗೆ ಕಾಲದಿಂದ ಕಾಲಕ್ಕೆ ಹೊಸ ಹೊಸ ಯಂತ್ರೋಪಕರಣಗಳನ್ನು ತಿ.ತಿ.ದೇ. ತೆಗೆದುಕೊಡುತ್ತಿದೆ.

**ಆಲಯದ ಅಭಿವೃದ್ಧಿ:** 1934 - 35 ರಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ ಆಲಯದ ಬಲಿಪೀಠ ಹಾಗೂ ತಿರುಪತಿಯ ಗೋವಿಂದರಾಜ ಸ್ವಾಮಿಯ ಆಲಯದ ಧ್ವಜ ಸ್ತಂಭವನ್ನು ಚಿನ್ನದ ಗಿಲೀಟಿನ ತಗಡಿನಿಂದ ಹೊದಿಸಲಾಯಿತು. 1939 ರಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಚಿನ್ನದ ಕಿರೀಟದಲ್ಲಿ ಅಲಂಕರಿಸಲು ರತ್ನಗಳ ಒಂದು ಪುಷ್ಪವನ್ನು ತಯಾರಿಸಲಾಯಿತು. 1941 ರಲ್ಲಿ ಒಂದು ಲಕ್ಷ ರೂಪಾಯಿ ವೆಚ್ಚದಲ್ಲಿ ಒಂದು ರಜತ ರಥವನ್ನು ಮಾಡಿಸಲಾಯಿತು. 1942 ರಲ್ಲಿ ತಿರುಮಲೆಯ ಸ್ವಾಮಿಗೆ ಹೊಸದಾದ ಮಹಾರಥವನ್ನು ಮಾಡಿಸಲಾಯಿತು. 1945 ರಲ್ಲಿ ರತ್ನಕಿರೀಟವೊಂದನ್ನು ಹತ್ತು ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಮಾಡಿಸಲಾಯಿತು. ಈಚೆಗೆ ಸ್ವಾಮಿಯ ಶಂಖ ಚಕ್ರಗಳಿಗೂ ಅಮೂಲ್ಯ ರತ್ನಗಳನ್ನು ಸೇರಿಸಲಾಯಿತು.

1950 ರಿಂದೀಚೆಗೆ ಜೀರ್ಣೋದ್ಧಾರದ ಕೆಲಸಗಳನ್ನು ಎತ್ತಿಕೊಳ್ಳಲಾಯಿತು. ಗೋವಿಂದ ರಾಜಸ್ವಾಮಿ ಆಲಯದ ಒಳಗೋಪುರ, ರಾಮಸ್ವಾಮಿ ಆಲಯದ ದ್ವಾರಗೋಪುರ, ಪದ್ಮಾವತೀ ಅಮ್ಮನವರ ಆಲಯ ವಿಮಾನದ ಕಳಶದ ಚಿನ್ನದ ಮುಲಾಮೀಕರಣ. ಮುಖ ಮಂಟಪದ ಬಿಂಬಗಳನ್ನು, ಗೋವಿಂದರಾಜ ಸ್ವಾಮಿ ಆಲಯ ಹಾಗೂ ತಿರುಚಾನೂರು ಆಲಯಗಳಲ್ಲಿ ಹೊಸದಾಗಿ ಪುನ: ಮಾಡಲಾಯಿತು. ಶ್ರೀ ವೆಂಕಟೇಶ್ವರಸ್ವಾಮಿ ಆಲಯದ ಪಡಿಕಾವಲಿ ಗೋಪುರ ಹಾಗೂ ಒಳಗೋಪುರಗಳು ಹೇಳತಕ್ಕಂತಹ ಜೀರ್ಣೋದ್ಧಾರದ ಕೆಲಸ ಗಳಾಗಿವೆ.

ಆನಂದ ನಿಲಯ ವಿಮಾನವನ್ನು 18 ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಜೀರ್ಣೋದ್ಧಾರಗೊಳಿಸಿ ಚಿನ್ನದ ಗಿಲೀಟು ಮಾಡಿಸಲಾಯಿತು.

ತುಂಬ ಈಚಿನ ಸಾಧನೆಗಳಲ್ಲಿ ಕೆಲವು ಎಂದರೆ - ಬೆಟ್ಟಕ್ಕೆ ಇನ್ನೊಂದು ವಾಹನ ರಸ್ತೆಯನ್ನು ಹೊಸದಾಗಿ ಮಾಡಿಸಲಾಗಿದೆ. ಇದರಿಂದ ಹೊಸ ರಸ್ತೆಯಲ್ಲಿ ಬೆಟ್ಟವನ್ನು ಏರುವ ವಾಹನಗಳು ಹೋಗುತ್ತವೆ ಹಾಗೂ ಹಳೆಯ ರಸ್ತೆಯಲ್ಲಿ ತಿರುಪತಿಗೆ ಹಿಂದಿರುಗುತ್ತವೆ. ಇದರಿಂದಾಗಿ ಪ್ರಯಾಣ ಸುಖಕರವಾಗಿ, ಯಾತ್ರಿಕರಿಗೆ ಹೆಚ್ಚು ಆರಾಮವಾಗಿದೆ.

1979 ರ ಕಾಯದೆಯಂತೆ 1-3-79 ರಲ್ಲಿ ಉಂಟಾದ ಹೊಸ ಕಾರ್ಯನಿರ್ವಾಹಕ ಮಂಡಲಿಯು ಆರ್ಜಿತ ಸೇವೆಗಳ ಹಾಗೂ ಧರ್ಮದರ್ಶನದ ಸಮಯಗಳಲ್ಲಿ ದೂರಗಾಮಿ ಪರಿವರ್ತನೆಯನ್ನು ಪ್ರವೇಶಗೊಳಿಸಿದೆ. ಇದರಿಂದಾಗಿ ಸ್ವಾಮಿಯ ಶುಲ್ಕ ರಹಿತ ದರ್ಶನವಾದ ಸರ್ವದರ್ಶನವು ಬೆಳಿಗ್ಗೆ 6 ಗಂಟೆಯಿಂದ ರಾತ್ರಿ 12 ವರೆಗೆ ನಿರಂತರವಾಗಿ (ಮಧ್ಯಾಹ್ನ ಸಂಜೆಗಳ ನೈವೇದ್ಯ ಸಮರ್ಪಣೆಯ ಹೊತ್ತು ಹೊರಪಡಿಸಿ) ನಡೆಯುವಂತಾಗಿದೆ. ವಿಶೇಷಪೂಜೆ, ತಿರುಪ್ಪಾವಡಾ ಅಭಿಷೇಕಗಳಿಗೂ ಎರಡು ಗಂಟೆಗಳು ಮಾತ್ರವೇ ಅವಕಾಶ.

ಮುದ್ರಣಾಲಯವನ್ನು ಅಭಿವೃದ್ಧಿ ಗೊಳಿಸುವ ಹೊಸ ಯೋಜನೆಯೊಂದನ್ನು ಕೈಗೆತ್ತಿಕೊಂಡು ಕೆಲಸ ಚುರುಕಾಗಿ ನಡೆಯುತ್ತಿದೆ. ಕೆಲವೇ ದಿನಗಳಲ್ಲಿ ದೇಶದಲ್ಲಿಯೇ ಉತ್ತಮವಾದ ವಿಧಾನದಲ್ಲಿ ಧಾರ್ಮಿಕ ಸಾಹಿತ್ಯ ಹೊರಬೀಳಲಿದೆ.

ಒಂದು ಆಧುನಿಕ ಸರತಿಯ ಸಾಲಿನ ಸಮುದಾಯ ನಿರ್ಮಾಣದ ಮಹತ್ತರವಾದ ಕಾರ್ಯವನ್ನು ಕೈಗೆತ್ತಿಕೊಳ್ಳಲಾಗಿದೆ. 1.5 ಕೋಟಿ ರೂಪಾಯಿ ವೆಚ್ಚದಲ್ಲಿ ನಿರ್ಮಾಣವಾಗುವ ಈ ವೈಕುಂಠಂ ಕ್ಯೂಕಾಂಪ್ಲೆಕ್ಸ್‌ನಲ್ಲಿ ಒಂದುಬಾರಿಗೆ 14000 ಮಂದಿ ಕುಳಿತುಕೊಳ್ಳುವ ಅವಕಾಶವಿರುತ್ತದೆ. ಇಲ್ಲಿ ಶೌಚಗೃಹ, ಸ್ನಾನ ಗೃಹಗಳೂ ಉಂಟು. ಇದು ಎರಡು ವರ್ಷದ ಅವಧಿಯಲ್ಲಿ ಪೂರ್ಣಗೊಳ್ಳುವ ನಿರೀಕ್ಷೆಯಿದೆ. ಇದು ಪೂರ್ಣಗೊಂಡಾಗ ಯಾತ್ರಿಕರು ಕಾಯುವಿಕೆಯಲ್ಲಿನ ಬೇಸರ ಹುಟ್ಟಿಸುವ ಏಕತಾನತೆಯನ್ನು ಕಳೆದು ಕೊಳ್ಳುವರು. ವಿಶೇಷ ದರ್ಶನಗಳು ಸೇವೆಗಳು ಪ್ರತ್ಯೇಕವಾಗಿವೆ. ದಿನವೊಂದಕ್ಕೆ 18 ಗಂಟೆಗಳ ಉಚಿತ ದರ್ಶನದ ಅವಕಾಶವಿದೆ. ಸಾಮಾನ್ಯದಿನಗಳಲ್ಲಿ ಎಲ್ಲರಿಗೂ ಎರಡು ಮೂರು ಗಂಟೆಗಳಲ್ಲಿ ದರ್ಶನ ವಾಗುವುದು. (ಈ ಮಾತು 1980 ರದು - ಅನುವಾದಕ) ಈ ಅವಧಿಯ ಕಾಯುವಿಕೆಯೂ ಸಾಧ್ಯವಿಲ್ಲದವರಿಗೆ ವಿಶೇಷ ಪ್ರವೇಶದ ಟಿಕೆಟ್‌ಗಳಿವೆ. ದೇಶದ ವಿವಿಧ ಸಮಾಚಾರ ಕೇಂದ್ರಗಳಲ್ಲಿಯೂ ದೊರೆಯುತ್ತವೆ. ಇವರನ್ನು ನೇರವಾಗಿ ಆಲಯದ ಸಾಲಿನಲ್ಲಿ ಸೇರಿಸಲಾಗುವುದು. ಆಲಯದ ಒಳಗೆ ಎಲ್ಲರೂ ಸಮಾನರೆಂದೇ ಪರಿಗಣಿತವಾಗುವರು.

ಬೆಟ್ಟದ ಮೇಲೆ ಉಚಿತ ವಾಹನ ಸೌಲಭ್ಯವನ್ನು ಕಾಟೇಜುಗಳಿಗೆ, ಬಸ್ ನಿಲ್ದಾಣಕ್ಕೆ ಏರ್ಪಡಿಸಲಾಗಿದೆ. ಕಾಲುಹಾದಿಲ್ಲಿ ನೀರಿನ ಸೌಲಭ್ಯವನ್ನು ಪ್ರಥಮ ಚಿಕಿತ್ಸಾ ಸೌಲಭ್ಯವನ್ನು ಏರ್ಪಡಿಸಿ ವಿದ್ಯುದ್ದೀಪಗಳನ್ನು ಹಾಕಿಸಲಾಗಿದೆ.

ಸರದಿಯ ಸಾಲಿನ ಕೋಣೆಗಳಲ್ಲಿ ಕಾಫಿ, ಹಾಲು, ಅಲ್ಪೋಪಹಾರ ಸೌಲಭ್ಯವಿದೆ. ಆಲಯದ ಪಾವಿತ್ರ್ಯವನ್ನು ಪರಿರಕ್ಷಿಸಲು ತಿರುಮಲೆಯ ಮೇಲೆ ಎಲ್ಲ ರೀತಿಯ ರಾಜಕೀಯ ಸಮಾವೇಶಗಳನ್ನು ಸಭೆಗಳನ್ನು ನಿಷೇಧಿಸಲಾಗಿದೆ. ಧರ್ಮಕರ್ತರ ಸಭೆಗಳು ಮಾತ್ರವೇ ನಡೆಯತಕ್ಕದ್ದು. ಇವು ಕೂಡ ಯಾತ್ರಿಕರ ಸೌಕರ್ಯದ ಆಲಯದ ವ್ಯವಹಾರಗಳ ಬಗ್ಗೆ ಮಾತ್ರವೇ ಆಗುವಂತಹವು.

ಸಾಮಾಜಿಕ ಸಮಾವೇಶಗಳನ್ನು ಬೆಟ್ಟದ ಮೇಲೆ ನಿಷೇಧಿಸಲಾಗಿದೆ. ತಿ. ತಿ. ದೇವಸ್ಥಾನಗಳು ವೇದಪಾರಾಯಣಕ್ಕೆ ಪ್ರೋತ್ಸಾಹ ನೀಡುತ್ತ ಬಂದಿದೆ. ಆಯ್ದ ಇತರ ಆಲಯಗಳಲ್ಲಿನ ವೇದಪಾರಾಯಣ ದಾರರಿಗೂ ಸಂಭಾವನೆ ನೀಡುತ್ತ ಪ್ರೋತ್ಸಾಹಿಸುತ್ತಿದೆ.

ಲಾಭನಷ್ಟಗಳಿಲ್ಲದಂತೆ ಇತರ ಆಲಯಗಳಿಗೆ ವಿಗ್ರಹಗಳನ್ನು ನೀಡುವಿಕೆ, ಕಲ್ಯಾಣಮಂಟಪ ನಿರ್ಮಾಣ, ಆಲಯಗಳ ಪೂಜೆಗೆ ಬೇಕಾದ ವಸ್ತುಗಳನ್ನು ನೀಡುವಿಕೆಗಳಲ್ಲಿ ಸಹಾಯ ಮಾಡುತ್ತ ಬಂದಿದೆ.

1979 ರ ಹೊಸ ಕಾಯದೆಯ ಸಹಾಯದಿಂದಾಗಿ ಕೆಂಪುಟೇಪಿಗೆ ಕತ್ತರಿಬಿದ್ದು ಕೆಲಸಗಳೆಲ್ಲ ತ್ವರೆ ತ್ವರೆಯಾಗಿ ನಡೆದು ದೇವರ ಸೇವೆಯಲ್ಲಿ ಯಾತ್ರಿಕ ಸೇವೆಯಲ್ಲಿ ತಿ. ತಿ. ದೇವಸ್ಥಾನಗಳು ಸಫಲವಾಗುವುದೆಂದು ನಿರೀಕ್ಷಿಸ ಲಾಗಿದೆ.

(ಮುಂದುವರೆಯುವುದು.)

# ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಟ್ರಸ್ಟ್

**ತಿ. ತಿ. ದೇವಸ್ಥಾನಗಳ ಪರಿಪಾಲನಾ ಭವನ, ಕೆ.ಟಿ.ರಸ್ತೆ ತಿರುಪತಿ, (ಆಂ.ಪ್ರ.),**

**(ನೋಂದಣಿ ಸಂಖ್ಯೆ - 18/94)**

**ಡಾ|| ಪಿ. ಕೃಷ್ಣಯ್ಯ,** ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ.

**ಪ್ರಿಯ ದಾನಿಗಳೆ;**

ಅನ್ನದಾನಕ್ಕಿಂತ ಇನ್ನು ದಾನಗಳಿಲ್ಲ. ನಮ್ಮ ದೇಶದಲ್ಲಿ ಅಗತ್ಯವಿದ್ದವರಿಗೆ, ಹಸಿದವರಿಗೆ ಅನ್ನದಾನ ಮಾಡುವುದು ಒಂದು ಸೇವೆ ಮಾತ್ರವೇ ಅಲ್ಲ, ವೇದಕಾಲದಿಂದಲೂ ಪರಂಪರೆಯಾಗಿ ಆಚರಣೆಯಲ್ಲಿರುವ ಪವಿತ್ರ ಕಾರ್ಯವಾಗಿದೆ. ಅನ್ನದಾನ ಮಾಡುವವರು ದೇವತೆಗಳ ಸಮರಾಗುವರೆಂದು ಹೇಳಲಾಗಿದೆ.

ತಿರುಮಲೆಗೆ ಆಗಮಿಸುವ ಯಾತ್ರಿಕರಿಗೆ ಉಚಿತವಾದ ಹಾಗೂ ಆರೋಗ್ಯಕರವಾದ ಭೋಜನವನ್ನು ನೀಡುವ ಉದ್ದೇಶದಿಂದ ಶ್ರೀ ವೆಂಕಟೇಶ್ವರ ಅನ್ನದಾನ ಟ್ರಸ್ಟ್ 1985 ರಲ್ಲಿ ತಿ. ತಿ. ದೇವಸ್ಥಾನಗಳಿಂದ ಆರಂಭವಾಯಿತು. ಇದಕ್ಕೆ ಭಾರತದ ಎಲ್ಲೆಡೆಗಳಿಂದಲೂ ದಾತರ ಉತ್ಸಾಹಪೂರ್ಣವಾದ ಬೆಂಬಲ ಕಂಡುಬಂದಿದೆ.

**ಈ ಯೋಜನೆಯ ವಿವರಗಳು :**

I. ವ್ಯಕ್ತಿ, ಸಂಘ, ಸಂಸ್ಥೆಗಳವರು ವೈಯಕ್ತಿಕವಾಗಿ ಅಥವಾ ಎರಡೆರಡು ಸಂಘ ಸಂಸ್ಥೆಗಳು ಐದು ಲಕ್ಷ ರೂಪಾಯಿ ಅಥವಾ ಅದರ ಗುಣಕಗಳಲ್ಲಿ ದಾನ ಮಾಡಬಹುದು.

1. ದಾನಿಗಳ ಹೆಸರನ್ನು ಎದ್ದು ಕಾಣುವಂತೆ ಉಚಿತ ಭೋಜನದ ಕೋಣೆಗಳಲ್ಲಿ ಬರೆಸಿಡಲಾಗುವುದು.
2. ದಾನಿಗಳಿಗೆ ವರ್ಷಕ್ಕೆ ಒಮ್ಮೆ ಮೂರುದಿನಗಳ ಕಾಲ ತಿರುಮಲೆಯಲ್ಲಿ ಉಚಿತ ಸುಸಜ್ಜಿತ ವಸತಿ ನೀಡಲಾಗುವುದು.
3. ದಾನಿಯ ಐದುಮಂದಿಗೆ ಉಚಿತವಾಗಿ ದರ್ಶನವನ್ನು ಏರ್ಪಡಿಸಲಾಗುವುದು.
4. ದಾನಿಗಳಿಗೆ ಒಮ್ಮೆ ಮಾತ್ರವೇ ಸ್ವಾಮಿಯ ಹಾಗೂ ಅಮ್ಮನವರ ಬಂಗಾರದ ಮುಲಾಮಿನ ಪ್ರತಿಮೆಗಳ ಪ್ಲಾಕಿಕೆಯನ್ನು ನೀಡಲಾಗುವುದು. ವರ್ಷಕ್ಕೆ ಒಮ್ಮೆ ಉತ್ತರೀಯ ಬಹುಮಾನ ನೀಡಲಾಗುವುದು.
5. 80 (ಜಿ) ಕಲಮು ಹೇಳುವಂತೆ ಈ ದಾನವು ಆದಾಯಕರ ಮುಕ್ತವಾಗಿರುತ್ತದೆ.

II. ಎಸ್. ವಿ. ನಿತ್ಯಾನ್ನದಾನಯೋಜನೆಗೆ ತಮ್ಮ ವಂತಿಗೆಯಾಗಿ ಒಂದು ಸಾವಿರ ರೂಪಾಯಿ ಅಥವಾ ಅದರ ಗುಣಕಗಳಲ್ಲಿ ವಂತಿಗೆಯನ್ನು ನೀಡಿ 80 (ಜಿ.) ಕಲಮಿನನ್ವಯ ಆದಾಯಕರ ವಿಮುಕ್ತಿಯನ್ನು ಪಡೆಯಬಹುದಾಗಿದೆ.

**ದಾನಗಳನ್ನು ಹೇಗೆ ಕಳುಹಿಸಬೇಕು :**

ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಲ್ಲಿ "ಶ್ರೀ ವೆಂಕಟೇಶ್ವರ ನಿತ್ಯಾನ್ನದಾನ ಟ್ರಸ್ಟ್" ಹೆಸರಿನಲ್ಲಿ ಡಿ. ಡಿ. ಯನ್ನು ಪಡೆದು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ., ತಿರುಪತಿ, ಆಂಧ್ರಪ್ರದೇಶ. ಇವರಿಗೆ ಕಳುಹಿಸಬೇಕು.

ಹೆಚ್ಚಿನ ಮಾಹಿತಿಗಾಗಿ ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ,**

ತಿ.ತಿ.ದೇ. ಪರಿಪಾಲನಾಭವನ - ತಿರುಪತಿ - 517 501.

**ನಿತ್ಯಾನ್ನದಾನ ಯೋಜನೆಯಲ್ಲಿ ಭಾಗವಹಿಸಿರಿ.**

**ಉತ್ತಮ ಉನ್ನತ ಸೇವೆಯಲ್ಲಿ ಪಾಲುದಾರರಾಗಿರಿ.**

## ವಾರ್ತಾ ಲಹರಿ

### ವೈಭವದ ಆನಿವರ ಆಸ್ಥಾನ

ಜುಲೈ ತಿಂಗಳ 16 ರಂದು ಸೂರ್ಯನು ಕರ್ಕಾಟಕ ಸಂಕ್ರಾಂತಿಯನ್ನು ಪ್ರವೇಶಿಸಿ ದಕ್ಷಿಣಾಯನ ಆರಂಭವಾದಾಗ ತಿರುಮಲೆಯಲ್ಲಿ ವಾರ್ಷಿಕ ಆನಿವರ ಆಸ್ಥಾನ ನಡೆಯಿತು. ಅಂದು ಬೆಳಗ್ಗೆ ಏರ್ಪಾಡಾಗಿದ್ದ ವಿಶೇಷ ಆಸ್ಥಾನದಲ್ಲಿ ಸ್ವಾಮಿಗೆ ವರ್ಷದ ಲೆಕ್ಕವನ್ನು ಒಪ್ಪಿಸಲಾಯಿತು. ದೊಡ್ಡ ಜೀಯರು ಸ್ವಾಮಿಗಳು ಮೂಲವರಿಗೂ ಮಲೆಯಪ್ಪ ಸ್ವಾಮಿಗೂ ರೇಷ್ಮೆ ವಸ್ತ್ರಗಳ ಕಾಣಿಕೆ ನೀಡಿದರು. ಕಾರ್ಯಕ್ರಮದಲ್ಲಿ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ, ಪೆದ್ದ ಜಿಯಂಗಾರ್, ಸಂಯುಕ್ತ ಕಾರ್ಯ ನಿರ್ವಹಣಾ ಧಿಕಾರಿಗಳಾದ ಶ್ರೀ ಬಾಲ ಸುಬ್ರಹ್ಮಣ್ಯಂ, ಶ್ರೀ ನಾರಾಯಣ -ಆಲಯ ಪೇಷ್ಕಾರ್, ಶ್ರೀ ಡಿ. ಎಸ್. ಪ್ರಭಾಕರರಾವ್ ಅವರುಗಳು ಭಾಗ ವಹಿಸಿದ್ದರು.

ಅಂದು ಸಂಜೆ ಸ್ವಾಮಿಗೆ ಅತ್ಯಂತ ವೈಭವದ ಪುಷ್ಪಪಲ್ಲಕ್ಕಿ ಸೇವೆಯನ್ನು ಒದಗಿಸಲಾಯಿತು. ಹಲವು ಹನ್ನೊಂದು ರೀತಿಯ ಹೂವಿನ ಅಲಂಕಾರಮಾಡಿದ ಪಲ್ಲಕ್ಕಿಯಲ್ಲಿ ಶ್ರೀ ಮಲೆಯಪ್ಪಸ್ವಾಮಿಯನ್ನೂ ಉಭಯ ನಾಯಕಿಯರನ್ನೂ ಅಧಿರೋಹಗೊಳಿಸಿ ನಾಲ್ಕು ರಥಬೀದಿಗಳಲ್ಲಿಯೂ ಉತ್ಸಾಹ ಸಂಭ್ರಮ ಗಳಿಂದ ಮೆರವಣಿಗೆ ಮಾಡಲಾಯಿತು. ಹಲವಾರು ಮಂದಿ ಭಕ್ತರು ಆರ್ಜಿತ ಸೇವಾಶುಲ್ಕ ಸಲ್ಲಿಸಿ ಪುಷ್ಪಪಲ್ಲಕ್ಕಿಯ ನಿರ್ವಾಹಕರಾಗಿ ನಡೆದರೆ, ಅಸಂಖ್ಯಾತ ಭಕ್ತರು ರಸ್ತೆಯ ಇಕ್ಕೆಲಗಳಲ್ಲಿ ನಿಂತು ಮಂಗಳಾರತಿಗೆ ಕಾಯಿ ಕರ್ಪೂರ ನೀಡಿ, ಭಕ್ತಿಯಿಂದ ಸ್ವಾಮಿಯನ್ನು ಬರಮಾಡಿ ಕೊಂಡರು.

ಈ ಬಾರಿಯ ಪುಷ್ಪಪಲ್ಲಕ್ಕಿಯ ವಿಶೇಷವೆಂದರೆ ಪಲ್ಲಕ್ಕಿ ತಿರುವೀಧಿಗಳಲ್ಲಿ ತಿರುಗುವವರೆಗೆ ಮೌನವಾಗಿದ್ದ ಪ್ರಕೃತಿ ಮೆರವಣಿಗೆಯ ಮುಗಿತಾಯದ ನಂತರ ಕುಂಭದ್ರೋಣವಾಗಿ ಮಳೆ ಸುರಿದದ್ದು. ಇದರಿಂದಾಗಿ ಮೆರವಣಿಗೆಯ ಆನಂದ ಇಮ್ಮಡಿಯಾಯಿತು.








ತಿರುಪತಿಯಲ್ಲಿ ಈಚೆಗೆ ರಕ್ತನಿಧಿ ಸಂಗ್ರಹಾಲಯವನ್ನು ಆರಂಭಿಸಲಾಯಿತು. ಶ್ರೀವಾರಿ ರಕ್ತದಾನಿಗಳ ಸಂಘದ ವತಿಯಿಂದ ಏರ್ಪಾಡಾಗಿದ್ದ ಈ ನಿಧಿಯನ್ನು ತಿ.ತಿ.ದೇ. ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ನಾರಾಯಣ ಅವರುಉದ್ಘಾಟಿಸಿದರು.

### ತಿರುಮಲೆ ತಿರುಪತಿ ದೇವಸ್ಥಾನಗಳು, ತಿರುಪತಿ.

# ಯಾತ್ರಿಕರಿಗೆ ಸೂಚನೆ

**ವಸತಿ :**

ತಮ್ಮ ಅತಿ ಸಮೀಪದ ತಿ.ತಿ.ದೇ. ಸಮಾಚಾರ ಕೇಂದ್ರದಿಂದ, ತಿರುಮಲೆಯಲ್ಲಿ ತಮ್ಮ ವಸತಿಯ ಮುಂಗಡ ಮೀಸಲಾತಿಯನ್ನು ಪಡೆಯಬಹುದು ಅಥವಾ ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇವಸ್ಥಾನಗಳು, ತಿರುಪತಿ - ಇವರ ಹೆಸರಿನಲ್ಲಿ 100 ರೂಪಾಯಿಗಳ ಡಿ. ಡಿ. ಯನ್ನು ಪಡೆದು, ಅಸಿಸ್ಟೆಂಟ್ ಎಕ್ಸಿಕ್ಯುಟಿವ್ ಆಫೀಸರ್ (ಸ್ವಾಗತ - 1) ತಿ. ತಿ. ದೇವಸ್ಥಾನಗಳು; ತಿರುಮಲೆ - ಇವರಿಗೆ ಕನಿಷ್ಠ ಪಕ್ಷ ಒಂದು ತಿಂಗಳ ಮೊದಲು ತಮ್ಮ ಆಗಮನದ ವಿವರಗಳನ್ನು ತಿಳಿಸುವ ಪತ್ರದೊಡನೆ ಕಳುಹಿಸಿ ಮುಂಗಡ ಕಾಯ್ದಿರಿಸಬಹುದು.

ವಿವರಗಳಿಗಾಗಿ ಸಂಪರ್ಕಿಸಿ - ದೂರವಾಣಿ - 77777 ವಿಸ್ತರಣ - 3626.

**ಆರ್ಜಿತ ಸೇವೆಗಳು :**

ಆರ್ಜಿತ ಸೇವೆಗೆ ತಕ್ಕ ಶುಲ್ಕದ ಡಿ. ಡಿ. ಯನ್ನು 'ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ' ಇವರ ಹೆಸರಿಗೆ ಪಡೆದು ಮೂರು ತಿಂಗಳ ಮೊದಲೇ ಅದನ್ನು ತಮ್ಮ ಅಭ್ಯರ್ಥನ ಪತ್ರದೊಡನೆ - ಪೇಷ್ಕಾರ್ ತಿರುಮಲೆ ಆಲಯ ತಿರುಮಲೆ - ಇವರಿಗೆ ಕಳುಹಿಸಿ ಸೇವೆಯನ್ನು ಖಚಿತ ಪಡಿಸಬಹುದು.

ವಿವರಗಳಿಗಾಗಿ ಸಂಪರ್ಕಿಸಿ - ದೂರವಾಣಿ - 77777 ವಿಸ್ತರಣ - 3679.

**ದರ್ಶಿಸತಕ್ಕ ಸ್ಥಳಗಳು :**

ಆಲಯದ ಪಕ್ಕದಲ್ಲಿರುವ ಸ್ವಾಮಿ ಪುಷ್ಕರಿಣಿ, 2 ಕಿ. ಮೀ. ದೂರದ ಆಕಾಶಗಂಗೆ, 5 ಕಿ.ಮೀ. ದೂರದ ಪಾಪವಿನಾಶಿನಿ, 3 ಕಿ.ಮೀ. ದೂರದ ವೈಕುಂಠತೀರ್ಥ, 16 ಕಿ.ಮೀ. ದೂರದ ತುಂಬುರುತೀರ್ಥ, 1 ಕಿ.ಮೀ. ದೂರದ ಶಿಲಾತೋರಣ, 3 ಕಿ.ಮೀ. ದೂರದ ಸ್ವಾಮಿ ಪಾದಗಳು, ತಿರುಮಲೆಯ ಎಸ್.ವಿ. ಮ್ಯೂಜಿಯಂ.

**ಸಾರಿಗೆ ಸೌಲಭ್ಯ :**

ತಿರುಪತಿಯಿಂದ ಎರಡೂ ಘಟ್ಟದ ರಸ್ತೆಗಳಲ್ಲಿ ಎ.ಪಿ.ಎಸ್.ಆರ್.ಟಿ.ಸಿ. ಯವರು ಸಾಕಷ್ಟು ಬಸ್‌ಗಳನ್ನು ಓಡಿಸುತ್ತಿದ್ದಾರೆ. ಕಾಲು ಹಾದಿಯ ಮೂಲಕ ಬೆಟ್ಟವನ್ನೇರಿ ಹೊರಡುವ ಯಾತ್ರಿಕರಿಗೆ ಪ್ರಾಥಮಿಕ ಕನಿಷ್ಠ ಸೌಲಭ್ಯಗಳುಂಟು. ತಿರುಮಲೆಯಲ್ಲಿ ಕಾಟೇಜುಗಳು, ಸತ್ರಗಳು - ಆಲಯ - ಮೊದಲಾದಗಳ ಪ್ರಯಾಣಕ್ಕೆ ಉಚಿತ ಬಸ್‌ಗಳಿವೆ. ತಿರುಪತಿಯ ಅಲಿಪಿರಿ ಟೋಲ್‌ಗೇಟಿನಿಂದ ಬೆಟ್ಟದ ಮೇಲಕ್ಕೆ ತಮ್ಮ ವಸ್ತುಗಳನ್ನು ಉಚಿತವಾಗಿ ಸಾಗಿಸುವ ಸೌಲಭ್ಯವುಂಟು.

**ಮಾಡಬೇಕಾದವು :**

ಕೆಟ್ಟ ಹವ್ಯಾಸಗಳನ್ನು ಬಿಡುವುದರ ಮೂಲಕ - ಸಹಯಾತ್ರಿಕರಲ್ಲಿ ಧಾರ್ಮಿಕ ಭಾವನೆಗಳನ್ನು ಪ್ರೋತ್ಸಾಹಿಸುವುದರ ಮೂಲಕ, ತಿರುಮಲೆಯ ಪಾವಿತ್ರ್ಯವನ್ನು ಕಾಪಾಡಿರಿ. ತಮ್ಮ ಕಾಣಿಕೆಗಳನ್ನು ಶ್ರೀ ವೆಂಕಟೇಶ್ವರಸ್ವಾಮಿಯ ಆಲಯದ ಹುಂಡಿಯಲ್ಲಿ ಮಾತ್ರವೇ ಸಮರ್ಪಿಸಿರಿ. ಆಲಯದೊಳಗೆ "ಓಂ ಶ್ರೀ ವೆಂಕಟೇಶಾಯ ನಮಃ" ಎಂದು ಧ್ಯಾನಿಸಿರಿ. ದೇವರಲ್ಲಿಯೇ ಮನಸ್ಸನ್ನು ಕೇಂದ್ರೀಕರಿಸಿ. ತಿರುಮಲೆಯನ್ನು ಶುಭ್ರವಾಗಿರಿಸಿ.

**ಮಾಡಬಾರದವು :**

ಧೂಮಪಾನ ಮಾಡಬೇಡಿರಿ. ಮತ್ತು ಪದಾರ್ಥಗಳನ್ನು ತೆಗೆದುಕೊಳ್ಳಬೇಡಿರಿ. ಮಾಂಸಾಹಾರವನ್ನು ತೆಗೆದುಕೊಳ್ಳದಿರಿ. ದರ್ಶನ ಹಾಗೂ ವಸತಿಗಾಗಿ ದಳ್ಳಾಳಿಗಳನ್ನು ಆಶ್ರಯಿಸದಿರಿ. ಆಲಯದಲ್ಲಿ ಸುತ್ತ ಮುತ್ತ ಪಾದರಕ್ಷೆಗಳನ್ನು ಧರಿಸದಿರಿ.

## ಪವಿತ್ರೋತ್ಸವ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯದಲ್ಲಿ ಜುಲೈ 29 ಭಾನುವಾರದಿಂದ ಆಗಸ್ಟ್ 1 ರ ಬುಧವಾರದವರೆಗೆ ನಾಲ್ಕು ದಿನಗಳ ಕಾಲ ಪವಿತ್ರೋತ್ಸವ ನಡೆಯಿತು.

ಜುಲೈ 29 ರಂದು ಸಂಜೆ ಅಂಕುರಾರ್ಪಣೆ ಆಗಿ ಜುಲೈ 30 ರಂದು ಪವಿತ್ರ ಪ್ರತಿಷ್ಠೆ ನಡೆಯಿತು. ಆಲಯದ ನಿತ್ಯ ನೈಮಿತ್ತಿಕ ಪೂಜಾ ಕ್ರಮುಗಳಲ್ಲಿ ಅನವಧಾನದ ದೋಷ ಪರಿಹಾರಕ್ಕಾಗಿ ಮಾಡುವ ಪವಿತ್ರೋತ್ಸವ ಒಂದು ಯಜ್ಞದಂತೆ ನಿರ್ವಹಿಸಲಾಗುತ್ತದೆಯಾಗಿ ಮಾರನೆಯ ದಿನ 31 ರಂದು ಪವಿತ್ರಗಳ ಮೆರವಣಿಗೆ ನಡೆಯಿತು. ಯಾಗಶಾಲೆಯಲ್ಲಿ ಪ್ರತ್ಯೇಕ ಪೂಜೆಗಳಾದವು. ವರಾಹಸ್ವಾಮಿಯ ಆಲಯದವರೆಗೆ ತೆಗೆದು ಕೊಂಡು ಬಂದ ಪವಿತ್ರಗಳ ಸಮರ್ಪಣೆ ನಡೆಯಿತು. ಸ್ವಾಮಿಯ ಉತ್ಸವ ಮೂರ್ತಿಗಳಿಗೆ ವಿಶೇಷ ತಿರುಮಂಜನವಾದ ಮೇಲೆ ನಡೆದ ಈ ಕಾರ್ಯಕ್ರಮದ ನಂತರ ಅಂದು ಸಂಜೆ ಊರ ಮೆರವಣಿಗೆ ನಡೆಯಿತು.

ಆಗಸ್ಟ್ 1 ರಂದು ಪವಿತ್ರೋತ್ಸವದ ಪೂರ್ಣಾಹುತಿ ನಡೆಯಿತು.

## ಗೋಕುಲಾಷ್ಟಮಿ

ಆಗಸ್ಟ್ 12 ರಂದು ಭಾನುವಾರ ತಿ.ತಿ.ದೇ. ಡೈರಿ ಫಾರಂನಲ್ಲಿ ವೈಭವದಿಂದ ಗೋಕುಲಾಷ್ಟಮಿ ಉತ್ಸವಗಳು ನಡೆದವು.

ಶ್ರೀಕೃಷ್ಣ ಜನ್ಮಾಷ್ಟಮಿ ಸಂದರ್ಭದಲ್ಲಿ ಡೈರಿ ಫಾರಂನ ಎಲ್ಲ ಹಸುಗಳನ್ನೂ ಅಲಂಕರಿಸಿ ಗೋಶಾಲೆಯನ್ನು ಶುಭ್ರಗೊಳಿಸಿ, ಗೋಪೂಜೆ ಯನ್ನೂ ಅಲ್ಲಿಯೇ ಇರುವ ಶ್ರೀ ವೇಣುಗೋಪಾಲಸ್ವಾಮಿ ಪೂಜೆಯನ್ನೂ ಘನವಾಗಿ ನೆರವೇರಿಸಲಾಯಿತು. ವೇದಮಂತ್ರ ಪಠಣ, ಸಂಕೀರ್ತನ, ಗಾಯನಗಳ ನಡುವೆ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ ಅವರು ಪತ್ನೀಸಹಿತರಾಗಿ ಭಕ್ತಿ ಶ್ರದ್ಧೆಗಳಿಂದ ಗೋಪೂಜೆಯ.ನ್ನು ನೆರವೇರಿಸಿ ಕೊಟ್ಟರು. ಗೋವಿನ ಹಾಲನ್ನು ಕರೆದು ಶ್ರೀ ವೇಣುಗೋಪಾಲಸ್ವಾಮಿಗೆ ನಿವೇದಿಸ ಲಾಯಿತು.

ಈ ಕಾರ್ಯಕ್ರಮದಲ್ಲಿ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ನಾರಾಯಣ ದಂಪತಿಗಳೂ, ಧರ್ಮಪ್ರಚಾರ ಪರಿಷತ್ ಕಾರ್ಯದರ್ಶಿ ಡಾ|| ಎಚ್.ಎಸ್. ಬ್ರಹ್ಮಾನಂದ ಅವರೂ ಭಾಗವಹಿಸಿದರು.

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯದಲ್ಲಿ ಗೋಕುಲಾಷ್ಟಮಿ ಉತ್ಸವವನ್ನು ಶ್ರೀಕೃಷ್ಣಸ್ವಾಮಿ ಆಸ್ಥಾನದೊಡನೆ ಆಚರಿಸ ಲಾಯಿತು.

ಆಗಸ್ಟ್ 12 ರಂದು ಬೆಳಗ್ಗೆ ಆಲಯದ ಗರ್ಭಗುಡಿಯ ಶ್ರೀಕೃಷ್ಣ ರುಕ್ಮಿಣಿಯರನ್ನು ತಿರುಮಾಮಣಿ ಮಂಟಪಕ್ಕೆ ಕರೆತಂದು ತಿರುಮಂಜನ, ವಿಶೇಷಪೂಜೆ ಅಲಂಕಾರಗಳನ್ನು ನಡೆಸಲಾಯಿತು. ಶ್ರೀಕೃಷ್ಣಸ್ವಾಮಿ ಆಸ್ಥಾನದಲ್ಲಿ ಪಂಚಾಂಗ ಪಠಣವಾಗಿ ನಿವೇದನೆಯಾಯಿತು.

## ನಾಗೇಂದ್ರ ಬಾಬು ನಿವೃತ್ತಿ

ತಿರುಮಲೆ ತಿರುಪತಿ ದೇವಸ್ಥಾನಗಳ ಎಕ್ಸಿ ಕ್ಯೂಟಿವ್ ಇಂಜ ನಿಯರ್ II ಆಗಿ ಕೆಲಸ ಮಾಡುತ್ತಿದ್ದ ಶ್ರೀನಾಗೇಂದ್ರ ಬಾಬು ಅವರು ಈಚೆಗೆ ಸೇವಾನಿವೃತ್ತಿ ಹೊಂದಿದರು.



1964 ರಲ್ಲಿ ತಿ. ತಿ. ದೇವಸ್ಥಾನಗಳಲ್ಲಿ ಉದ್ಯೋಗಕ್ಕೆ ಸೇರಿದ ಶ್ರೀಯುತರು ಸ್ವಾಮಿಯ ಆಲಯದ ಮರಮತ್ತು ಕೆಲಸಗಳಲ್ಲಿ ತಮ್ಮನ್ನು ತಾವು ಯಶಸ್ವಿ ಯಾಗಿ ತೊಡಗಿಸಿಕೊಂಡಿದ್ದರು. ತಿರುಮಲೆಯ ಎರಡೂ ಘಟ್ಟದ ವಾಹನ ರಸ್ತೆಗಳು, ತಿರುಚಾನೂರು ದೇವಾಲಯ, ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯ ಕಪಿಲತೀರ್ಥದ ದೇವಾಲಯವೇ - ಮೊದಲಾಗಿ ಇತರ ಮುಖ್ಯ ದೇವಾಲಯ ಗಳಲ್ಲಿಯೂ ಕಾಲಕಾಲಕ್ಕೆ ಸೂಕ್ತ ಜೀರ್ಣೋದ್ಧಾರದ ಕೆಲಸಗಳನ್ನು ಕೈಗೊಂಡು ನಿರ್ವಹಿಸಿದ್ದರು.

ಅವರ ವಿಶ್ರಾಂತ ಜೀವನ ಸಮಾಧಾನ ಶಾಂತಿ ಆರೋಗ್ಯ ಆಯಸ್ಸುಗಳಿಂದ ಕೂಡಿರಲೆಂದು ಸಪ್ತಗಿರಿ ಹಾರೈಸುತ್ತದೆ.

ಶ್ರೀ ವೆಂಕಟೇಶ್ವರ ಕೇಂದ್ರ ಗ್ರಂಥಾಲಯ ಸಂಶೋಧನ ಕೇಂದ್ರ - ತಿರುಪತಿ

## ಒಂದು ವಿನಂತಿ

ನಮ್ಮ ಪರಂಪರೆಯ ವಾಸ್ತುಶಿಲ್ಪದ ಹಾಗೂ, ಆಧುನಿಕ ವಾಸ್ತು ಶಾಸ್ತ್ರದ ಉತ್ತಮಾಂಶಗಳನ್ನು ಒಳಗೊಂಡು ನಿಂತಿರುವ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಅಪೂರ್ವ ಪುಸ್ತಕ ಭಂಡಾರವಾಗಿ, ವೇದೋಪನಿಷತ್ತುಗಳ, ಇತಿಹಾಸ ಪುರಾಣಗಳ, ಶಾಸ್ತ್ರ ಭಗವದ್ಗೀತೆಗಳ ಉಪಾದೇಯವೂ ಭವ್ಯವೂ ಆದ ಸಂದೇಶವನ್ನು ಪ್ರಸಾರಮಾಡುವ ಉದ್ದೇಶಹೊಂದಿದೆ. ಈಗ 40,000 ಕ್ಕಿಂತ ಹೆಚ್ಚು ಪುಸ್ತಕಗಳಿವೆ.

ಸನಾತನ ಧರ್ಮದ ವೈವಿಧ್ಯಮಯ ಮುಖಗಳ, ಭಾರತೀಯ ಚಿಂತನ ಶೀಲತೆಯ, ತತ್ವ, ಧರ್ಮ, ಸಂಗೀತವೇ - ಮೊದಲಾದ ಪರಂಪರಾಗತ ಸಂಪದ್ಭರಿತ ಸಂಸ್ಕೃತಿಯಲ್ಲಿ ಸಂಶೋಧನೆ ನಡೆಸಲು ಅವಕಾಶವನ್ನು ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಕಲ್ಪಿಸುವುದು. ಭಾರತೀಯ ಶಾಸ್ತ್ರದ ಬಗ್ಗೆ ಅಪರೂಪವೂ, ಅಮುದ್ರಿತವೂ ಆದ ಅಂಶಗಳನ್ನು ಪ್ರಕಟಿಸುವುದೂ, ಸಂಸ್ಕೃತ ಪಾಠಗಳ ಮೂಲ ಪ್ರತಿಗಳನ್ನೂ, ಅವುಗಳ ಸರಳಾನುವಾದಗಳನ್ನೂ ಪ್ರಕಟಿಸುವುದೂ, ನಮ್ಮ ಉದ್ದೇಶವಾಗಿದೆ. ಈ ಪುಸ್ತಕ ಭಂಡಾರವು ಭಾರತೀಯ ಸಂಸ್ಕೃತಿಯ ದೇವಾಲಯವಾಗಿ, ಶಿಕ್ಷಣ, ಸಂಶೋಧನೆಯ ಮಹತ್ ಸಂಸ್ಥೆಯನ್ನಾಗಿ ಮಾಡುವುದೇ ನಮ್ಮ ಪವಿತ್ರತಮ ಕರ್ತವ್ಯವಾಗಿದೆ. ಇಡೀ ಯೋಜನೆ ಸಾಕಷ್ಟು ಸಂಪನ್ಮೂಲವನ್ನು ಅಪೇಕ್ಷಿಸುತ್ತದೆ.

ಹೀಗಾಗಿ, ಸಾರ್ವಜನಿಕರಲ್ಲಿ, ಸ್ವಯಂಸೇವಾ ಸಂಸ್ಥೆಗಳಲ್ಲಿ ಧನದ ರೂಪದಲ್ಲಿ ಆಗಲೀ, ಪುಸ್ತಕ ರೂಪದಲ್ಲಿಯಾಗಲೀ ಉದಾರವಾದ ದೇಣಿಗೆಗಳನ್ನು ನೀಡಬೇಕೆಂದು ಮನವಿ ಮಾಡುತ್ತೇವೆ.

ವ್ಯಕ್ತಿಗಳು ಹಾಗೂ ಸಂಸ್ಥೆಗಳು ತಮ್ಮಲ್ಲಿನ ಅಪರೂಪದ ಪುಸ್ತಕಗಳನ್ನೂ ಗ್ರಂಥಾಲಯಕ್ಕೆ ನೀಡಬಹುದು.

ತಮ್ಮ ಎಲ್ಲ ದೇಣಿಗೆಗಳನ್ನು ಪುಸ್ತಕವಾಗಲೀ, ಹಣವಾಗಲೀ ಕಳುಹಿಸಬೇಕಾದ ವಿಳಾಸ -

ವಿಶೇಷಾಧಿಕಾರಿ,<br>ಶ್ರೀ ವೆಂಕಟೇಶ್ವರಕೇಂದ್ರ ಗ್ರಂಥಾಲಯ<br>ಹಾಗೂ<br>ಸಂಶೋಧನ ಕೇಂದ್ರ .<br>ತಿರುಪತಿ - 517 502.

## ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

### ತಿರುಚಾನೂರು

# ಅಷ್ಟದಳ ಪಾದಪದ್ಮಾರಾಧನೆ

ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದಲ್ಲಿ ಪ್ರತಿಸೋಮವಾರ ಭಕ್ತ ಅಪೇಕ್ಷೆಯನ್ನು ಪೂರೈಸಲು ಅಷ್ಟದಳ ಪಾದ ಪದ್ಮ ಆರಾಧನೆಯನ್ನು ಪ್ರವೇಶಗೊಳಿಸಲಾಗಿದೆ.

ಪೂಜಾ ಸಮಯ - ಬೆಳಗ್ಗೆ 6.30 ರಿಂದ 7.30

ಆರ್ಜಿತ ಶುಲ್ಕ - ರೂ. 1500/-

ಬಹುಮಾನ - 10 ಗ್ರಾಂ ರಜತಪದಕ, ಉತ್ತರೀಯ, ಕುಪ್ಪುಸದ ಕಣ.

ಪ್ರವೇಶಾವಕಾಶ - ಐದು ಮಂದಿಗೆ.

**ಭಕ್ತರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ಕೋರಲಾಗಿದೆ.**



## ಯಾತ್ರಿಕ ಭಕ್ತರಲ್ಲಿ.....

## ವಿನಂತಿ

**"ಡಯಲ್ – ಯುವರ್ ಇ.ಓ."**



ತಿರುಮಲೆಯಲ್ಲಿ ತಮ್ಮ ಅನುಭವಕ್ಕೆ ಬಂದ ಕುಂದು ಕೊರತೆಗಳ ಬಗ್ಗೆ ಹೆಚ್ಚು - ಕಡಿಮೆಗಳ ಬಗ್ಗೆ - ಸಲಹೆ ಸೂಚನೆಗಳನ್ನು ಕಾರ್ಯನಿರ್ವಹಣಾಧಿಕಾರಿಯವರಿಗೆ ನೇರವಾಗಿ ನೀಡಬಹುದು. ಅದಕ್ಕಾಗಿ ಪ್ರತಿ ಶುಕ್ರವಾರ ಬೆಳಗ್ಗೆ 8-30 ರಿಂದ 9-00 ಗಂಟೆಯವರೆಗೆ ತಾವು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಗಳೊಡನೆ ದೂರವಾಣಿಯಲ್ಲಿ ಮಾತನಾಡಬಹುದು.

*ದೂರವಾಣಿ ಸಂಖ್ಯೆ - 08574-77261.*

ಯಾತ್ರಿಕರ ಸೌಕರ್ಯಗಳನ್ನು ಹೆಚ್ಚಿಸಲು
ತಮ್ಮ ಸುಲಭತರ ಯಾತ್ರೆ ಕೈಗೂಡಲು
ದಯವಿಟ್ಟು ಮಾತನಾಡಿ.

Edited and Published on behalf of T. T. Devasthanams by Dr. N. S. Rama Murthy, and printed at T.T.D. Press
by I. Parvateeswara Rao, Manager, T. T. D. Press, Tirupati - 517 507.

# ತಿರುಮಲೆಯಲ್ಲಿ

## ಮಾಡಬೇಕಾದವು ಹಾಗೂ ಮಾಡಬಾರದವುಗಳು

**ಮಾಡಬೇಕಾದವು :**

★ ತಿರುಮಲೆಗೆ ಬರುವ ಮುನ್ನ ನಿಮ್ಮ ಇಷ್ಟ ಅಥವಾ ಕುಲದೈವವನ್ನು ಪೂಜಿಸಿರಿ.

★ ನಿಮ್ಮ ಪ್ರಯಾಣದ ಟಿಕೆಟ್‌ಗಳನ್ನು, ತಿರುಮಲೆಯಲ್ಲಿ ನಿಮ್ಮ ವಸತಿಯನ್ನು ಮೊದಲೇ ಕಾಯ್ದಿರಿಸಿ.

★ ಶ್ರೀ ವೆಂಕಟೇಶ್ವರಸ್ವಾಮಿಯನ್ನು ದರ್ಶಿಸುವ ಮೊದಲು ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನಮಾಡಿ, ಅಲ್ಲಿಯೇ ಇರುವ ಶ್ರೀ ವರಾಹಸ್ವಾಮಿಯನ್ನು ದರ್ಶಿಸಿರಿ.

★ ಆಲಯವನ್ನು ಪ್ರವೇಶಿಸುವ ಮೊದಲು ಸ್ನಾನಮಾಡಿ, ಶುಭ್ರವಾದ ಉಡುಪು ಧರಿಸಿರಿ. ಆಲಯದ ಒಳಗಡೆ ಸ್ವಾಮಿಯಲ್ಲಿ ಮನಸ್ಸನ್ನು ಕೇಂದ್ರೀಕರಿಸಿ.

★ ಆಲಯದ ಒಳಗಡೆ ಗಂಭೀರ ಮೌನವನ್ನು ಪಾಲಿಸಿರಿ ಮತ್ತು ಮನಸ್ಸಿನಲ್ಲಿ "**ಓಂ ನಮೋ ವೇಂಕಟೇಶಾಯ**" ಎಂದು ಜಪಿಸಿರಿ.

★ ತಿರುಮಲೆಯಲ್ಲಿ ಪಾಪನಾಶಿನಿಯಲ್ಲೂ, ಆಕಾಶಗಂಗೆಯಲ್ಲೂ ಸ್ನಾನಮಾಡಿರಿ.

★ ತಿರುಮಲೆಗೆ ಬಂದಾಗ ಪ್ರಾಚೀನಪರಂಪರೆಯನ್ನೂ ಆಚಾರವನ್ನೂ ಗೌರವಿಸಿ.

★ ಸಹಯಾತ್ರಿಕರಲ್ಲಿನ ಧಾರ್ಮಿಕ ಭಾವನೆಯನ್ನು ಗೌರವಿಸಿ, ಪ್ರೋತ್ಸಾಹಿಸಿ.

★ ತಮ್ಮ ಕಾಣಿಕೆಗಳನ್ನು ಹುಂಡಿಯಲ್ಲಿ ಮಾತ್ರವೇ ಸಮರ್ಪಿಸಿ.

★ ತಿರುಮಲೆಯಲ್ಲಿ ನಿಮ್ಮ ಸೇವೆ ಹಾಗೂ ಆಲಯದ ಬಗ್ಗೆ ವಿವರಗಳಿಗಾಗಿ ತಿ.ತಿ.ದೇ. ವಿಚಾರಣಾಕೇಂದ್ರದಲ್ಲಿ ಕೇಳಿ ವಿವರಗಳನ್ನು ಪಡೆಯಿರಿ.

**ಮಾಡಬಾರದವು :**

★ ತಮ್ಮೊಂದಿಗೆ ಹೆಚ್ಚಿನ ಹಣ, ಆಭರಣಗಳನ್ನು ತರಬೇಡಿ.

★ ಮಾಂಸಾಹಾರವನ್ನು ಬಳಸಬೇಡಿರಿ. ಮಾದಕ ವಸ್ತು ಪೇಯಗಳನ್ನು ಬಳಸಬೇಡಿರಿ. ಧೂಮಪಾನ ಮಾಡಬೇಡಿರಿ.

★ ವಸತಿಗಾಗಿ, ಶೀಘ್ರದರ್ಶನಕ್ಕಾಗಿ ದಳ್ಳಾಳಿಗಳನ್ನು ಆಶ್ರಯಿಸಬೇಡಿರಿ.

★ ಆಲಯದ ಒಳಗೆ, ಹೊರಗೆ ಪಾದರಕ್ಷೆಗಳನ್ನು ಧರಿಸಿ ಓಡಾಡಬೇಡಿರಿ.

★ ದೇವರನ್ನು ಸೇವಿಸುವುದರ ಹೊರತು ಬೇರೆ ಯಾವ ಕಾರಣಕ್ಕೂ ತಿರುಮಲೆಗೆ ಬಾರದಿರಿ. ಸಂಪ್ರದಾಯದಂತೆ ಆಲಯ ಪ್ರವೇಶ ನಿಷೇಧವಿದ್ದಲ್ಲಿ ಆಲಯ ಪ್ರವೇಶ ಮಾಡದಿರಿ.

★ ದೇವರ ದರ್ಶನಕ್ಕಾಗಿ ನೂಕುನುಗ್ಗಲು ಮಾಡದೆ ಸರತಿಯ ಸಾಲಿನಲ್ಲಿ ಸೇರಿರಿ.

★ ದೇವಾಲಯದಲ್ಲಿ ಉಗುಳುವುದೇ ಮುಂತಾದವುಗಳನ್ನು ಮಾಡದಿರಿ.

★ ಭಿಕ್ಷೆಯನ್ನು ಪ್ರೋತ್ಸಾಹಿಸದಿರಿ. ಹುಸಿ ಪ್ರಸಾದಗಳನ್ನು ಕೊಳ್ಳಬೇಡಿರಿ.

★ ತಿರುಮಲೆಯಲ್ಲಿ ಎಲ್ಲ ಹೂವುಗಳೂ ದೇವರಿಗೇ. ತಾವು ಹೂವು ಮುಡಿಯದಿರಿ.